# ಉಜ್ಜಿನಿ ಗ್ರಾಮಾಧ್ಯಯನ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ

ಸಂಶೋಧಕ
ರಮೇಶ ಕೆ.

ಮಾರ್ಗದರ್ಶಕರು
ಡಾ. ಹೆಚ್.ಕೆ. ನಾಗೇಶ್





ಜಾನಪದ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೩




## ಉಜ್ಜೈನಿ ಪಂಚಪೀಠ ಮಠ

# ದೃಢೀಕರಣ ಪತ್ರ

ಶ್ರೀ. ರಮೇಶ. ಕೆ. ಇವರು 'ಉಜ್ಜಿನಿ ಗ್ರಾಮ ಅಧ್ಯಯನ' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ ಹಂಪಿ, ಜಾನಪದ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: ೧೨.೦೪.೨೦೦೨
ವಿದ್ಯಾರಣ್ಯ

(ಡಾ. ಹೆಚ್.ಕೆ. ನಾಗೇಶ್)
ಮಾರ್ಗದರ್ಶಕರು
ಅಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಪ್ರಮಾಣ ಪತ್ರ

ಉಜ್ಜಿನಿ ಗ್ರಾಮಾಧ್ಯಯನ ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಡಾ. ಹೆಚ್.ಕೆ. ನಾಗೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಲಾಗಿದೆ. ಪ್ರಸ್ತುತ ಸಂಪ್ರಬಂಧ ಅಥವಾ ಅದರ ಯಾವುದೇ ಭಾಗವನ್ನು ಹಿಂದೆ ಯಾವುದೇ ಪದವಿಗಾಗಲಿ ಅಥವಾ ಇತರೆ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲ ಎಂದು ಈ ಮೂಲಕ ಘೋಷಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೨.೪.೨೦೦೨

(ರಮೇಶ್ ಕೆ.)

ಎಂ.ಫಿಲ್. ವಿದ್ಯಾರ್ಥಿ

ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

- ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕುಲಪತಿಗಳಾದ ಡಾ. ಎಚ್.ಜೆ. ಲಕ್ಕಪ್ಪಗೌಡ ಹಾಗೂ ಕುಲಸಚಿವರಾದ ಡಾ. ಕೆ.ವಿ. ನಾರಾಯಣ ಅಧ್ಯಯನಾಂಗದ ನಿರ್ದೇಶಕರಾದ ಡಾ. ಹಿ.ಚಿ. ಬೋರಲಿಂಗಯ್ಯ ಅವರಿಗೆ.
- ಎಂ.ಫಿಲ್ ಮಾರ್ಗದರ್ಶನ ಮಾಡಿದ ಪ್ರೀತಿಯ ಗುರುಗಳಾದ ಡಾ. ಎಚ್.ಕೆ. ನಾಗೇಶ್ ಅವರಿಗೆ, ಜಾನಪದ ವಿಭಾಗದ ಮುಖ್ಯಸ್ಥರಾದ ಡಾ. ಮಂಜುನಾಥ ಬೇವಿನಕಟ್ಟಿ, ಅಧ್ಯಾಪಕರಾದ ಮೊಗಳ್ಳಿ ಗಣೇಶ್, ಸ.ಚಿ. ರಮೇಶ್, ಹರಿಶ್ಚಂದ್ರ ದಿಗ್ಸಂಗಿಕರ್, ಸಿ.ಟಿ. ಗುರುಪ್ರಸಾದ ಅವರಿಗೆ ಹಾಗೂ ವಿಭಾಗದ ವೀರೇಶ, ವೇಣುಗೋಪಾಲ, ತಿಂದಪ್ಪ ಅವರಿಗೆ.
- ಪೂಜ್ಯ ಗುರುಗಳಾದ ಡಾ. ಮೃತ್ಯುಂಜಯ ಹೊರಕೇರಿ, ಡಾ. ಶಾಂತಿನಾಥ ದಿಬ್ಬದ, ಡಾ. ಮಲ್ಲಿಕಾ ಘಂಟಿ, ಶ್ರೀಮತಿ ಕೆ. ಶಾರದ, ಡಾ. ಕೆ. ರವೀಂದ್ರನಾಥ, ವಿರೂಪಾಕ್ಷಿ ಪೂಜಾರಹಳ್ಳಿ, ಲಿಂಗಾರೆಡ್ಡಿಶೇರಿ, ಕೆ.ಎಚ್ ಹನುಮಂತಪ್ಪ ಅವರಿಗೆ,
- ಅಧ್ಯಯನಕ್ಕೆ ಪ್ರೀತಿಯಿಂದ ಕಳುಹಿಸಿ ಕಷ್ಟ ಸುಖ ಸಹಿಸಿಕೊಂಡ ಪೂಜ್ಯ ತಂದೆ ಹೊಸೂರಪ್ಪ ತಾಯಿ ಪ್ರಮೀಳಮ್ಮ, ತಮ್ಮಂದಿರಾದ ಸುರೇಶ, ಶ್ರೀನಿವಾಸ, ತಂಗಿ ಅಕ್ಕಮಹಾದೇವಿ, ಅಜ್ಜಿಂದಿರಾದ ಗೋಣಿಬಸಮ್ಮ, ಗುಜ್ಜಲ ವೀರಮ್ಮ, ಪ್ರೀತಿಯ ಅಣ್ಣ ಗುಜ್ಜಲ ರಾಮಚಂದ್ರ, ಭೀಮಪ್ಪ ಗುಳೇದ ಅವರಿಗೆ,
- ಸಂಶೋಧನೆಯ ಸಂದರ್ಭದಲ್ಲಿ ಚರ್ಚೆಗಿಳಿದು ಬುದ್ದಿಯಲ್ಲಿ ಹಂಚಿಕೆದಾರರಾಗಿ ಸದಾ ಓದುಗನನ್ನಾಗಿ ಮಾಡಿದ ಗೆಳೆಯರಾದ ಜಾಜಿ ದೇವೇಂದ್ರಪ್ಪ, ಸಣ್ಣಪಾಪಯ್ಯ ದೇವರಹಟ್ಟಿ, ಅಕ್ಕಿಸುಜಾತ, ಸೋಮೇಶ್ ಉಪ್ಪಾರ, ಓಂಪ್ರಕಾಶ, ಉಮಾಪತಿ, ನಾಗವರ್ಮ, ಕೊಟ್ರೇಶ, ವಸಂತ ಪುತ್ರಿ, ಮೋಹನ್ ಕವಿತಾರಾಣಿ, ಭಾರತಿ, ಉಷಾ, ಅನ್ನಪೂರ್ಣ, ಸುನಂದ, ನೇತ್ರ ತನುಜ ಮೂಕಾಂಬಿಕ ರೇವಣ್ಣ, ರಾಜಶೇಖರ, ಶ್ಯಾಮಮೂರ್ತಿ, ಎರ್ರಿಸ್ವಾಮಿ, ಸಿದ್ದೇಶ, ನನ್ನೂರಿನ ಎಲ್ಲ ಮಿತ್ರರಿಗೆ,
- ಸಂಶೋಧನೆಯುದ್ದಕ್ಕೂ ಓದು ಮತ್ತು ಬದುಕಿನ ಬಗ್ಗೆ ಕಾಳಜಿವಹಿಸಿದ ಅಣ್ಣಂದಿರಾದ ಸಣ್ಣಶಿವರಾಮ, ಕುಮಾರಸ್ವಾಮಿಹೆಗಡೆ, ವೆಂಕಟೇಶ ಐಹೊಳೆ ತಾಯಪ್ಪ ಹಾಗೂ ಪ್ರೀತಿಯ ಅತ್ತಿಗೆ ವಿ.ಸಿ. ವಾಣಿ, ಉಮಾ, ಸೀತ ಅವರಿಗೆ,

- ಸಂದರ್ಶನ ವೇಳೆಯಲ್ಲಿ ಸಹಕರಿಸಿದ ಉಜ್ಜಿನಿ ಗ್ರಾಮದ ಜಗದ್ಗುರು ಮರಳಸಿದ್ಧರಾಜ ದೇಶಿಕೇಂದ್ರ ಸ್ವಾಮಿಗಳಿಗೆ ಹಾಗೂ ಶ್ರೀ ರುದ್ರಪ್ಪ, ಡಾ. ರೇವಯ್ಯಾ ಒಡೆಯರ್, ಮಲ್ಲಿಕಾರ್ಜುನಗೌಡ ತೂಲಹಳ್ಳಿ, ಆಂಜನೇಯ, ಉದಯಕುಮಾರ್, ಶಂಕರಪ್ಪ ಟಿ.ಆರ್, ಹಾಗೂ ಸಮಸ್ತ ವಕ್ಕ, ಉಜ್ಜಿನಿ ಗ್ರಾಮದ ಜನಪದರಿಗೆ,
- ಚರ್ಚೆಯಲ್ಲಿ ಸಹಕರಿಸಿ ಪ್ರೋತ್ಸಾಹಿಸಿದ ವಿದ್ವಾಂಸರಾದ ಶ್ರೀ ಮುದೇನೂರು ಸಂಗಣ್ಣಜ್ಜ, ಚನ್ನಣ್ಣ ವಾಲೀಕಾರ, ಕೆ.ಆರ್. ದುರ್ಗಾದಾಸ, ರಂಗರಾಜವನಗುರ್ಗ, ಪ್ರಶಾಂತನಾಯಕ, ಡಾ. ಬಸವರಾಜ ಮಲಶೆಟ್ಟಿ, ಎಂ.ಎಂ. ಹುಡೇದ, ಶಂಭು ಬಳಿಗಾರ, ಗುಡಿಹಳ್ಳಿ ನಾಗರಾಜ, ಕುಂ.ವೀ., ಬಿ.ಟಿ. ಕಮುದಾ ನಾಯಕ್ ಅವರಿಗೆ, ಆಂಜನೇಯ, ಶಿವಾನಂದ, ಮಂಜುನಾಥ, ದಲಿತ ಸಾಹಿತ್ಯ ಪರಿಷತ್ತು, ಬಳ್ಳಾರಿ ಅವರಿಗೆ,
- ಸಂಶೋಧನೆಗೆ ಪೂರಕವಾಗಿ ಪುಸ್ತಕಗಳನ್ನು ಒದಗಿಸಿದ ಗ್ರಂಥಾಲಯದ ಸಿಬ್ಬಂದಿಯವರಿಗೆ ಹಾಗೂ ಅಂದವಾಗಿ ಡಿ.ಟಿ.ಪಿ. ಮಾಡಿದ ಋತ್ವಿಕ್ ಕಂಪ್ಯೂಟರ್ಸ್‌ನ ರಿಚರ್ಡ್ ಡಿಸೋಜ, ಅನಿತಾ ಡಿಸೋಜಾ ಹಾಗೂ ಬಸವರಾಜ ಅವರಿಗೆ ನನ್ನ ಪ್ರೀತಿಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

**ಕೆ. ರಮೇಶ**

# ಪರಿವಿಡಿ

# ಅಧ್ಯಾಯ ೧

# ಅಧ್ಯಯನದ ಉದ್ದೇಶ - ಸ್ವರೂಪ

ಅಲೆಮಾರಿ ಜೀವನದ ಹಂತದಿಂದ ಆರಂಭಿಸಿದ ಮಾನವನ ಜೀವನ ವಿಧಾನವು ಕ್ರಮೇಣ ಕಾಲಾಂತರದಲ್ಲಿ ಗುಂಪಾಗಿ ವಾಸಿಸುವ ನಾಗರೀಕ ಹಂತವನ್ನು ತಲುಪಿತು, ಈ ಹಂತದಲ್ಲಿ ಜಗತ್ತಿನ ಅನೇಕ ನಾಗರಿಕತೆಗಳು ಬೆಳೆದು ಬಂದವು. ಇಲ್ಲಿಂದಲೇ ವ್ಯವಸ್ಥಿತವಾದಂತಹ ಜೀವನ ಆರಂಭವಾಯಿತು. ಮುಂದಿನ ಹಂತದಲ್ಲಿ ತಮ್ಮ ತಮ್ಮ ಗುಂಪನ್ನು ಒಂದೆಡೆ ಸೇರಿಸಿ ಅನೇಕ ಸಮುದಾಯಗಳು ನೆಲೆನಿಂತವು. ಆ ನೆಲಗೆ ಒಂದು ಗುರುತಿಸಬಹುದಾದಂತಹ ಹೆಸರನ್ನು ನೀಡಲಾಯಿತು.

ಅದೇ ಮುಂದೇ ಊರು, ಗ್ರಾಮ ಹಳ್ಳಿ, ಹಟ್ಟಿ, ಹುಂಡಿ ಹೀಗೆ ವಾಸದ ನೆಲೆಗಳು ಆರಂಭವಾದವು. ತಮ್ಮದೇ ಆದಂತಹ ಮನೆ ಗುಡಿಸಲುಗಳ ರಚನೆಯಾಗಿ ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ 'ಗ್ರಾಮ ಸಮಾಜ' ಎಂಬ ಪರಿಕಲ್ಪನೆಯು ಮೂಡತೊಡಗಿತು. ಅಲೆಮಾರಿ ಜೀವನ ಸಂಸ್ಕೃತಿಯಿಂದ ಪಲ್ಲಟಗೊಂಡ ಮಾನವ ಸಮುದಾಯವು ಈ ಬಗೆಯ ಗ್ರಾಮಸಮಾಜದಲ್ಲಿ ಬದುಕಿದ್ದೇ ಜಗತ್ತಿನ ವಿಕಾಸಕ್ಕೆ ಮಹಾ ಮಾರ್ಗವಾಯಿತೆಂಬುದನ್ನು ಗಮನಿಸಬೇಕು. ಈ ಮೂಲಕ ಆಯಾ ಜನಾಂಗದ ಸಂಸ್ಕೃತಿಯು ಒಂದೊಂದು ನಲೆಯಲ್ಲಿ ಬೆಳೆಯುತ್ತಾ ಬಂದಿತು. ಇದೇ ಇಂದಿಗೂ ನಾಗರಿಕವೆಂದು ಕರೆಯಲ್ಪಡುವ ಆಧುನಿಕ ಹಾಗೂ ಆಧುನಿಕೋತ್ತರ ಜೀವನಕ್ಕೆ ಭದ್ರ ತಳಹದಿಯೆಂದು ಹೇಳಬಹುದು.

ಸಂಸ್ಕೃತಿಗಳ ಬೆಳವಣಿಗೆಯು ಬಹುಮುಖ್ಯವಾಗಿ ಬೆಳೆದು ಬಂದದ್ದು ಮೌಖಿಕ ಪರಂಪರೆಯಡಿಯಲ್ಲಿ. ಅಕ್ಷರಸ್ಥವಲ್ಲದ ಸಮುದಾಯದ ಬದುಕಿಗೆ ಮೌಖಿಕ ಸಂಪತ್ತು ತನ್ನ ಒಡಲಲ್ಲಿ ಅಪಾರವಾದ ಸಂಸ್ಕೃತಿಯ ಎಳೆಗಳನ್ನೂ ಸಮಾಜದ ಉನ್ನತಿಕೆಯನ್ನು ಅಡಗಿಸಿಟ್ಟುಕೊಂಡಿದೆ. ಪರಂಪರೆಯ ಗರ್ಭದಿಂದಲೇ ಒಟ್ಟು ಜಗತ್ತಿನ ಅಥವಾ ಪ್ರಾದೇಶಿಕವಾಗಿ ಎಲ್ಲೆಯನ್ನೂ ಗುರುತಿಸಿಕೊಂಡು, ಅಧ್ಯಯನ ಮಾಡುವಾಗ ಕನ್ನಡ ಸಂಸ್ಕೃತಿಯ ಬೇರುಗಳು ಅನಾವರಣಗೊಳ್ಳುತ್ತವೆನ್ನುವುದು ಸಾರ್ವಕಾಲಿಕ ಸತ್ಯವಾಗಿದೆ. ನಗರ ಸಂಸ್ಕೃತಿಯೆಂದು ಕರೆಯಿಸಿಕೊಳ್ಳುವಲ್ಲಿಯು ಕೂಡ ಇದರ ಹಿಂದೆ 'ಗ್ರಾಮ ಸಮಾಜ' ಎಂಬ ಪರಿಕಲ್ಪನೆಯ ಅಗಾಧವಾದ ಸೆಲೆಗಳಿವೆ. ಗ್ರಾಮ ಸಮುದಾಯ ಸಮಾಜದ ಮುಂದುವರೆದ ಜೀವನ ಸಂಸ್ಕೃತಿ ಕಾಲಾಂತರದಲ್ಲಿ ಅನೇಕ ಘಟ್ಟಗಳಲ್ಲಿ ಉಂಟಾದ ಮಾನವನ ಬದುಕಿನ ಸ್ಥಿತ್ಯಂತರಗಳು ತಿಳಿಯುತ್ತವೆ. ಈ ಬಗೆಯ ಸ್ಥಿತ್ಯಂತರಗಳು ಇಂದಿನ ಗ್ರಾಮ ಸಮಾಜದ ಮೇಲೆ ಉಂಟು ಮಾಡಿದ ಪರಿಣಾಮಗಳನ್ನು ಕುತೂಹಲದಿಂದ ಅಧ್ಯಯನ ಮಾಡುವಂತೆ ಪ್ರೇರೇಪಿಸುತ್ತವೆ.

ಆಧುನಿಕವಾಗಿ ಒಂದು ನಾಡಿನ ಭೌಗೋಳಿಕ ಎಲ್ಲೆಯನ್ನೂ ಗ್ರಹಿಕೆಯಲ್ಲಿರಿಸಿಕೊಂಡು ಸಂಸ್ಕೃತಿಯ ಅಧ್ಯಯನದಲ್ಲಿ ತೊಡುಗುವಾಗ ಇನ್ನಿತರ ಮೂಲಾಧಾರಗಳನ್ನು ಗಮನಿಸಿದಂತೆ, ಗ್ರಾಮೀಣ ಪರಿಸರ ಅಥವಾ ಪ್ರತ್ಯೇಕವಾಗಿ ಒಂದೊಂದು ಹಳ್ಳಿಯನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ, ಆಧುನಿಕತೆಯೊಳಗೆ ಸಿಲುಕಿ ಅನೇಕ ಗ್ರಾಮಗಳ ಮೌಲಿಕತೆ ಕ್ಷೀಣಿಸುತ್ತಿದೆ, ಆದುದರಿಂದ ಒಂದು ಹಳ್ಳಿಯಲ್ಲಿ ದೊರೆಯುವ ಜಾನಪದ ಪರಂಪರೆಯ ಹಾಡು, ಕಥೆ, ಒಗಟು ಗಾದೆ ಮುಂತಾದ ಸಾಹಿತ್ಯದ ಜೊತೆಜೊತೆಗೆ, ಅಲ್ಲಿನ ಗ್ರಾಮ್ಯ ಪರಿಸರದ ಸಾಮಾಜಿಕರ ಜೀವನ ವಿಧಾನ ವಿಶೇಷವಾಗಿ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಈ ಕಾರಣದಿಂದ ಗ್ರಾಮಗಳ ಅಧ್ಯಯನ ಅಗತ್ಯವಿದೆ.

ಒಂದು ಗ್ರಾಮವನ್ನು ಒಂದು ಸಂಸ್ಕೃತಿಯೆಂದು ಭಾವಿಸಬೇಕು. ಅದೊಂದು ಪುಟ್ಟ ಜಗತ್ತೇ ಆಗಿರುತ್ತದೆ. ಆ ಜಗತ್ತಿನಲ್ಲಿ ತನ್ನದೇ ಮಿತಿಯಲ್ಲಿ ಸಾಂಸ್ಕೃತಿಕ ಚೌಕಟ್ಟನ್ನು ಒದಗಿಸಿಕೊಡುತ್ತದೆ. ಬಹುಮುಖ್ಯವಾಗಿ ಕನ್ನಡ ಸಂಸ್ಕೃತಿಯ ಅಧ್ಯಯನದಲ್ಲಿ ಒಂದು ಗ್ರಾಮದ ಅಧ್ಯಯನ ಮಾಡುವ ಮೂಲಕ ಇಡಿಯಾದ ಸಂಸ್ಕೃತಿಯ ಪ್ರಾತಿನಿಧಿಕ ಅಂಶಗಳನ್ನು ಒಂದು ಭೌಗೋಳಿಕ ಮಿತಿಯ ಪುಟ್ಟ ಜಗತ್ತೆನ್ನಬಹುದಾದ "ಹಳ್ಳಿ"ಯು ಒದಗಿಸಿಕೊಡುತ್ತದೆ.

ಈ ದೃಷ್ಟಿಯಿಂದ ಗ್ರಾಮಗಳ ಅಧ್ಯಯನ ಮಹತ್ವದ್ದೆಂದು ಭಾವಿಸಬೇಕು. ಕನ್ನಡ ನಾಡಿನಲ್ಲಿ ಗ್ರಾಮಗಳ ಅಧ್ಯಯನ ಅಷ್ಟಾಗಿ ನಡೆದಿಲ್ಲ. ಆದಕಾರಣ ಇಲ್ಲಿ ಒಂದು ಗ್ರಾಮದ ಜನಪದ ಅಧ್ಯಯನದ ಮೂಲಕ, ಅದನ್ನು ನೋಡಿ ಮೌಖಿಕ ಪರಂಪೆಯ ಶ್ರೇಷ್ಠತೆಯನ್ನು ಸಂಸ್ಕೃತಿಗೆ ಹೀಗೆ ಆಕರವಾಗಿ ಬಳಸಬಹುದೆಂಬ ಒಳನೋಟಗಳ ಕಡೆಗೆ ಇಲ್ಲಿನ ಅಧ್ಯಯನವು ಕೇಂದ್ರೀಕೃತವಾಗಿರುತ್ತದೆ.

ಜಾನಪದೀಯ ಶಿಸ್ತಿನ ಮೂಲಕ ಒಂದು ಗ್ರಾಮದ ಸಮಗ್ರ ಅಭ್ಯಾಸದಿಂದ ಪ್ರಾದೇಶಿಕ ಸಂಸ್ಕೃತಿಯ ಚರಿತ್ರೆಯನ್ನು, ಅಲ್ಲಿನ ವೈಶಿಷ್ಟ್ಯತೆಯನ್ನು ಹೇಳುವ ಉದ್ದೇಶದಿಂದ ಪ್ರಕೃತ ಅಧ್ಯಯನವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

## ಗ್ರಾಮ ಅಧ್ಯಯನದ ಸ್ವರೂಪ

ಉಜ್ಜಿನಿ ಗ್ರಾಮ ಅಧ್ಯಯನವೆಂಬುದು ಒಂದು ಗ್ರಾಮದ ಜಾನಪದೀಯ ಸಾಂಸ್ಕೃತಿಕ ಅಧ್ಯಯನ, ಗ್ರಾಮೀಣ ಸಮುದಾಯದ ಉದ್ಯೋಗ, ವ್ಯವಹಾರ, ಊಟ, ಉಡಿಗೆ, ಮನರಂಜನೆ ಒಟ್ಟಾರೆ ಗ್ರಾಮೀಣ ಬದುಕೆಲ್ಲ ಇದರ ತೆಕ್ಕೆಗೆ ಒಳಗಾಗುತ್ತದೆ. ಒಂದು ನಿರ್ದಿಷ್ಟ ಗ್ರಾಮದ ಜಾನಪದ ಅಧ್ಯಯನಕ್ಕೆ ತೊಡಗುವ ಮೊದಲು ಸ್ಥೂಲವಾಗಿಯಾದರೂ ಈ ಅಧ್ಯಯನದ ರೂಪ-ರೇಷೆಗಳನ್ನು ಕಲ್ಪಿಸುವುದು ಒಳ್ಳೆಯದೆಂದು ತೋರುತ್ತದೆ.

*ಭೌಗೋಳಿಕ:* ಅಧ್ಯಯನಕ್ಕೆ ಒಳಪಡಿಸಲಿರುವ ಗ್ರಾಮದ ಭೌಗೋಳಿಕ ಪರಿಸರದ ವಿವರಣೆ ಬಹುಮುಖ್ಯವಾದದು. ಒಂದು ಹಳ್ಳಿಯ ಊಟ, ಉಡಿಗೆ, ಉದ್ಯೋಗ ಕ್ರಮಗಳು, ಆ ಭಾಗದ ಭೂಮಿಗುಣ ಮಳೆಯ ಪ್ರಮಾಣ, ಬೆಳೆಯ ರೀತಿಯನ್ನು ಅವಲಂಬಿಸಿವೆ. ಊರಿನ ಮೇರೆಗಳು, ದಾರಿಗಳು,

ಉದ್ಯೋಗ ವ್ಯವಸಾಯವನ್ನು ರೂಪಿಸುತ್ತವೆ. ಹಬ್ಬ ಹರಿದಿನ, ಉದ್ಯೋಗ, ವ್ಯವಹಾರಗಳನ್ನು ವಲಂಬಿಸಿಕೊಂಡು ಜನಪದ ಕಲೆ ಸಾಹಿತ್ಯಗಳು ಸೃಷ್ಟಿಗೊಳ್ಳುತ್ತವೆ.

ಈ ಭೌಗೋಳಿಕ ಪರಿಣಾಮವೇ ಅವರ ಭೌತಿಕ, ಬಾವುಕ, ಸಂಪ್ರಾದಾಯಗಳನ್ನು ರೂಪಿಸುತ್ತದೆ. ಹೀಗೆ ಬೆಟ್ಟ ಪ್ರದೇಶದ ಹಳ್ಳಿಯೊಂದರ ಜೀವನ ಕ್ರಮಗಳನ್ನು ಬಯಲು ಭೂಮಿಯ ಹಳ್ಳಿಯೊಂದರ ಜೀವನ ಕ್ರಮಗಳನ್ನು ಬಿನ್ನ ನೆಲೆಗಳಿಂದ ಪರಿಶೀಲಿಸಬೇಕಾಗುತ್ತದೆ.

**ಪುರಾಣ - ಐತಿಹ್ಯಗಳು**

ಪುರಾಣಗಳು ಜನಪದರ ಮೇಲೆ ವಿಶೇಷ ಪ್ರಬಾವ ಬೀರಿವೆ. ವಿಶೇಷವಾಗಿ ಮಹಾಭಾರತ, ರಾಮಾಯಣ, ಭಾಗವತ ಪುರಾಣಗಳು ಇವರನ್ನು ಆಳವಾಗಿ ಭೇದಿಸಿವೆ. ತಮ್ಮ ವಂಶದ ಅಜ್ಜಿ ಮುತ್ತಜ್ಜರನ್ನು ಮರೆಯುವ ಹಳ್ಳಿಗರು ಮಹಾಭಾರತದ ಭೀಮಾರ್ಜುನರ ಕತೆಗಳನ್ನು ಬೆಳಗು ಹರಿಯುವತನಕ ಹೇಳಬಲ್ಲರು. ತಮ್ಮ ಮಕ್ಕಳ ಕ್ರೀಡೆಗಳನ್ನು ಮರುದಿನವೇ ಮರೆಯುವ ಇವರು ಕೃಷ್ಣನ ಬಾಲಲೀಲೆಗಳನ್ನು ಮನದಣಿಯೇ ಹಾಡಬಲ್ಲರು, ಜಾನಪದರ ಕಲ್ಪಕಥೆಯು ಮೂಲಕಥೆಗಳಿಗೆ ಸೇರಿಕೊಂಡು ತಮ್ಮ ಜೀವನದಂತೆಯೇ ಅಲ್ಲಿಯ ಪಾತ್ರ, ಘಟನೆಗಳನ್ನು ಪೋಷಿಸುವುದು ತುಂಬ ಕೌತುಕ ಪೂರ್ಣ ವಿಷಯ.

ಜಾನಪದರ ಪುರಾಣಪ್ರೀತಿ ಇಲ್ಲಿಗೇ ನಿಲ್ಲುವುದಿಲ್ಲ. ತಮ್ಮ ಗ್ರಾಮ ಪರಿಸರದ ಗುಡಿ, ಗುಡ್ಡ, ನದಿ ಬೆಟ್ಟಗಳಿಗೆಲ್ಲ ಪುರಾಣ ಪ್ರಸಂಗವನ್ನ ತಗುಲಿಸಿ ಹೇಳುವುದು ಅವರಿಗೆ ಪ್ರೀತಿಯ ವಿಷಯ. ತಮ್ಮ ಸಮೀಪದ ಗುಡ್ಡದ ಮೇಲೆ ಬಂಡೆಗಳನ್ನು ನೋಡಿ ಅಲ್ಲಿ ಕಳ್ಳರು ವಾಸಿಸುತ್ತಿದ್ದರು ಎಂದು ಹೇಳುವುದು, ಹಾಸುಕಲ್ಲಿನಲ್ಲಿ ಒಳಲಿನಾಕೃತಿ ಇದ್ದರೆ ಸೀತೆ ಬತ್ತ ಕುಟ್ಟಿದ್ದೆನಿಸುತ್ತದೆ. ಬಂಡೆಯೊಂದರಲ್ಲಿ ಮೂಡಿದ ಪಾದ ಹನುಮಂತನದೆನಿಸುತ್ತದೆ. ಗೆರೆಗೆರೆಯಾದ ಆಕೃತಿ ಪಡೆದ ಕಲ್ಲು ಸೀತೆಯ ಸೆರಗಾಗುತ್ತದೆ. ಇಂಥ ಹೇಳಿಕೆಗಳು ಎಂದು ಪ್ರಾರಂಭವಾದವು? ಯಾರು ಇವನ್ನು ಹೇಳಲು ಪ್ರಾರಂಭಿಸಿದರು? ಇವುಗಳಿಗೆ ಖಚಿತ ಉತ್ತರ ಅಸಾಧ್ಯವಾದರೂ ಊರಿನ ದನ ಕಾಯುವ ಹುಡಗನಿಂದ ಹಿಡಿದು ಊರ ಪ್ರಮುಖರವರೆಗೆ ಎಲ್ಲರೂ ಇವನ್ನು ಆಗಿಹೋದ ವಿಷಯಗಳೆಂಬಂತೆ ವರ್ಣಿಸುತ್ತಾರೆ. ಇವುಗಳನ್ನು ಕುರಿತಾಗಿ ಊರ ಜನರಿಗೆ ಹೆಮ್ಮೆಕೂಡ, ಭಾರತದುದ್ದಕ್ಕೂ ಪುರಾಣಗಳೊಂದಿಗೆ ತಳಕು ಹಾಕಿಕೊಳ್ಳುವ ಗ್ರಾಮಗಳು ಹೇರಳವಾಗಿ ದೊರೆಯುತ್ತವೆ. ಕರ್ನಾಟಕದಲ್ಲಿ ಈ ಗ್ರಾಮಗಳಿಗೇನೂ ಕೊರೆತೆಯಿಲ್ಲ. ಇದೇ ಉದ್ದೇಶವಿಟ್ಟುಕೊಂಡು ಪರಿವೀಕ್ಷಣಾ ಕಾರ್ಯವೊಂದು ರಾಜ್ಯಾದ್ಯಂತ, ದೇಶಾದ್ಯಂತ ನಡೆಯಬೇಕಾಗಿದೆ. ಕಾಲಮಾನದ ದೃಷ್ಟಿಯಿಂದ ವಾಸ್ತವತೆಯ ದೃಷ್ಠಿಯಿಂದ ಸಂಶೋಧಕನಿಗೆ ಪುರಾಣ ಐತಿಹ್ಯಗಳು ಹೆಚ್ಚಿನ ಸಹಾಯ ನೀಡಬಲ್ಲವು.

**ಇತಿಹಾಸ (ಚರಿತ್ರೆ)**

ಪ್ರತಿಯೊಂದು ಹಳ್ಳಿಯಲ್ಲಿ ಇತಿಹಾಸದ ದಟ್ಟತೆ ಇರಲಿಕ್ಕಿಲ್ಲ. ಆದರೆ ಅದಕ್ಕೆ ಪೂರ್ವದಿಂದಲೂ

ಹರಿದುಬಂದ ಒಂದು ಸಾಮಾಜಿಕ ನಡೆಯಿರುತ್ತದೆ. ಆದಿವಾಸಿಗಳ ಪ್ರಾಥಮಿಕ ಹೆಜ್ಜೆಗಳಿಂದ ಓಡಿದು ನಾಗರಿಕತೆಯ ಮಟ್ಟದವರೆಗೆ ಇದರ ಸೆರಗು ಚಾಚುತ್ತದೆ.

ಅರಸರ, ಮಾಂಡಲಿಕ ಅರಸರ ಆಡಳಿತಕ್ಕೆ ಹೊರತಾಗಿರುವ ಜನಸಾಮಾನ್ಯರ ಜೀವನ ಕ್ರಮವನ್ನು ಐತಿಹಾಸಿಕವಾಗಿ ವಿಶ್ಲೇಷಿಸುವುದು ಕಷ್ಟದ ವಿಷಯ, ಅಳಿದುಳಿದ ಗುಡಿ, ಗುಂಡಾರಗಳು, ಮನೆ, ಮಠಗಳ ಅಡಿಪಾಯಗಳು ಪ್ರಚಲಿತವಿರುವ ಜನಪದ ಕಲೆ, ಸಾಹಿತ್ಯಗಳಂಥವು ಮಾತ್ರ ಈ ದಿಸೆಯಲ್ಲಿ ನೆರವಾಗಬಲ್ಲ ಸಾಮಾಗ್ರಿಗಳು, ಇತಿಹಾಸ ಪರಂಪರೆಯ ನೆರವಿಗೆ ಸಾಧನವಾಗಬಲ್ಲ ಬಹು ಮುಖ್ಯವಾದ ಇನ್ನೊಂದು ಆಕರವೆಂದರೆ ತಲೆಮಾರಿನಿಂದ ತಲೆಮಾರಿಗೆ ಕಿವಿಯಿಂದ ಕಿವಿಗೆ ಹರಿದುಬಂದಿರುವ ಪರಂಪರಾಗತ ಹೇಳಿಕೆಗಳು, ಈ ಹೇಳಿಕೆಗಳಲ್ಲಿ ಗೊಂದಲವಿರಬಹುದು, ಉತ್ಪ್ರೇಕ್ಷೆಯಿರಬಹುದು. ಆದರೆ ಸತ್ಯದ ಎಳೆಯೊಂದು ಇಲ್ಲಿಯೇ ಎಲ್ಲಿಯೋ ಒಂದೆಡೆ ಸಿಕ್ಕುಹಾಕಿಕೊಂಡಿರುತ್ತದೆ. ಇರುವ ಸಿಕ್ಕುಗಳನ್ನು ಜಾಗರೂಕತೆಯಿಂದ ಬಿಡಿಸಿಕೊಳ್ಳುತ್ತ ಹೋದಂತೆ ಸತ್ಯದ ಪೂರ್ಣ ದರ್ಶನವಲ್ಲದಿದ್ದರೂ ಅದರ ಕೆಲವಂಶವಾದರೂ ಗೋಚರಿಸಿತು.

ಗ್ರಾಮ ಅಧ್ಯಯನದಲ್ಲಿ ಇತಿಹಾಸಕ್ಕಿಂತ ಪ್ರಾಗೈತಿಹಾಸಿಕ ಅಂಶಗಳು ಹೆಚ್ಚು ಮುಖ್ಯವೆನಿಸುತ್ತವೆ. ಯಾಕೆಂದರೆ ಪ್ರತಿಯೊಂದು ಊರಲ್ಲಿ ಈಗಿನ ತಿಳಿವಳಿಕೆಯ ಇತಿಹಾಸವಿರಲಿಕ್ಕಿಲ್ಲ, ಆದರೆ ಪ್ರತಿಯೊಂದು ಊರಲ್ಲಿ ಪ್ರಾಗೈತಿಹಾಸಿಕ ಅಂಶಗಳು ಪ್ರಯತ್ನ ಪಟ್ಟರೆ ದೊರೆಯುತ್ತವೆ. ಇತಿಹಾಸದಲ್ಲಿ ಮುಚ್ಚಿ ಹೋದ ಜನಸಾಮಾನ್ಯರ ಜೀವನಕ್ರಮ ಪ್ರಾಗೈತಿಹಾಸದಲ್ಲಿ ಗೋಚರಿಸುತ್ತದೆ. ಈ ದೃಷ್ಟಿಯಿಂದ ಗ್ರಾಮ ಅಧ್ಯಯನವನ್ನು ಮಾಡುವರು ಇತಿಹಾಸ, ಇತಿಹಾಸಪೂರ್ವ ಎರಡು ಅವಧಿಗಳನ್ನ ಅವಲೋಕಿಸಬೇಕಾಗುತ್ತದೆ.

**ಸಾಮಾಜಿಕ**

ಹಲವಾರು ವ್ಯಕ್ತಿ, ಉದ್ಯೋಗ, ವರ್ಣ, ವರ್ಗಗಳಿಂದ ಕೂಡಿರುವ ಗ್ರಾಮ ತನ್ನದೇ ಆದ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿರುತ್ತದೆ. ಇದು ಬಹಳ ಮುಖ್ಯವಾದ ಹಂತ. ಯಾವುದೇ ಸಂಸ್ಕೃತಿ ಅಪ್ರಯತ್ನ ಪೂರ್ವಕವಾಗಿ ಅನೇಕ ಬಗೆಯ ಸಾಮಾಜಿಕ ಸಹಕಾರ, ಸಂಪ್ರದಾಯ, ಆಚರಣೆ ನಂಬಿಕೆಗಳನ್ನು ರೂಢಿಸಿಕೊಳ್ಳುತ್ತದೆ. ಕಾಲ ಸರಿದಂತೆ ಇವುಗಳಲ್ಲಿ ಬದಲಾವಣೆಗಳು ತಲೆದೋರಬಹುದು. ಈ ಎಲ್ಲಾ ವಿವರಣೆಗೆ ಮೊದಲು ಕುಟುಂಬ ವ್ಯವಸ್ಥೆಯನ್ನು ಅಭ್ಯಸಿಸಬೇಕಾಗುತ್ತದೆ.

ಭಾರತದಂಥ ದೇಶದಲ್ಲಿ ಉದ್ಯೋಗ ಮತ್ತು ಜಾತಿಗಳು ಮನುಷ್ಯನ ಅಂತಸ್ತನ್ನು ನಿರ್ಮಿಸುತ್ತವೆ, ಈ ಅಂತರದ ಮಧ್ಯದಲ್ಲಿಯೇ ಗ್ರಾಮೀಣರು ಕಲ್ಪಿಸಿಕೊಂಡ ಸಾಮಾಜಿಕ ವ್ಯವಸ್ಥೆ ಬೆರಗುಗೊಳಿಸುವಂಥದು, ಜೀವಿಸಲು ಈ ಹೊಂದಾಣಿಕೆ ಅನಿವಾರ್ಯವೆಂಬುದನ್ನು ಮನಗಾಣಬೇಕು, ಗ್ರಾಮೀಣ ಪರಿಸರದ ಉದ್ಯೋಗಗಳೇ ಹಾಗಿದ್ದು ಪರಸ್ಪರ ಅವಲಂಬನೆ ಅನಿವಾರ್ಯವಾದ ಅಂಶ, ಬಡಿಗನಿಗೆ ಕಾಳು ಬೇಕು. ಒಕ್ಕಲಿಗನಿಗೆ ಕೃಷಿಯ ಉಪಕರಣಗಳು ಬೇಕು. ಬಡಿಗ, ಒಕ್ಕಲಿಗ, ಇಬ್ಬರಿಗೂ ಮಡಿಕೆ ಬೇಕು. ಮದುವೆ, ಮುಂಜಿವೆಗಳಲ್ಲಿ ಜಂಗಮರು ಅಥವಾ ಪುರೋಹಿತರು ಬಹುಪಾಲು ಜನರಿಗೆಬೇಕು. ಈ ಬಗೆಯ

ಆಂತರಿಕ ವ್ಯವಸ್ಥೆ ಬಹುಕಾಲದಿಂದ ರೂಢಿಸಿಕೊಂಡು ಬಂದ ಸರಳ ಬದುಕಿಗೆ ಒದಗಿದ ಅನಿವಾರ್ಯತೆ. ಗ್ರಾಮೀಣರು ಕೆಲವು ಸಲ ಅತ್ಮಾಭಿಮಾನಕ್ಕೆ ಕಟ್ಟುಬಿದ್ದು ಇನ್ನಾ ಕೆಲವು ಸಲ ಆಕಸ್ಮಿಕ ಒದಗಿದ ಸಂಘರ್ಷಕ್ಕೆ ಕಟ್ಟುಬಿದ್ದು ವ್ಯಾಜ್ಯ ಕಾಯಬಹುದು. ಆದರೆ ಮತ್ತೆ ಮರುದಿನ ತನಗೆ ಇನ್ನೊಬ್ಬರಿಗೆ ಅವಶ್ಯವಾದ ಉದ್ಯೋಗವನ್ನು ಮುಂದುವರಿಸುವುದು ಅನಿವಾರ್ಯವೆನಿಸುತ್ತದೆ. ಕೃಷಿಕನೊಂದಿಗೆ ಜಗಳವಾಡಿ ಬಡಿಗ ಊರು ಬಿಟ್ಟರೆ ಕೃಷಿಯೇನೂ ನಿಲ್ಲುವುದಿಲ್ಲ. ಬೇರೊಂದು ಊರಿಂದ ಮತ್ತೊಬ್ಬ ಬಡಿಗ ಬಂದು ಕೆಲಸವನ್ನು ಮುಂದುವರಿಸುತ್ತಾನೆ ಅಷ್ಟೇ.

ವೈಮನಸ್ಸು, ಸಂಘರ್ಷಗಳನ್ನು ತಿಳಿಗೊಳಿಸಲು ಆಡಳಿತ ವ್ಯವಸ್ಥೆಯೊಂದು ಗ್ರಾಮೀಣ ಪ್ರದೇಶಕ್ಕುಂಟು ಗೌಡರು, ಬಣಕಾರರು, ಸ್ವಾಮಿಗಳಂಥ ಪ್ರಮುಖರನ್ನೊಳಗೊಂಡ ಹಿರಿಯ ದೈವ ಈ ಸಂಬಂಧದಲ್ಲಿ ಕಾರ್ಯ ನಿರ್ವಹಿಸುತ್ತದೆ.

ಹಳ್ಳಿ ಸಮುದಾಯದ ಹಾರ್ದಿಕ ಹೊಂದಾಣಿಕೆ ದಟ್ಟವಾಗಿ ತೋರ್ಪಡುವುದು ಹುಟ್ಟು, ಸಾವು, ಮದುವೆಯಂಥ ಸಂದರ್ಭಗಳಲ್ಲಿ, ಪರಸ್ಪರರಲ್ಲಿ ಇರಬಹುದಾದ ಅಷ್ಟಿಷ್ಟು ಬೇದಭಾವಗಳನ್ನು ಮರೆತು ಸುಖ-ದುಃಖಗಳಲ್ಲಿ ಒಂದಾಗುವ ಜನಪದರ ರೀತಿ ಅವರ ಬದುಕಿಗೊಂದು ಸುರಕ್ಷತೆಯನ್ನೂ, ಭರವಸೆಯನ್ನೂ ಒದಗಿಸಿದೆ.

**ಧಾರ್ಮಿಕ**

ಗ್ರಾಮೀಣರು ಐಹಿಕ ಬದುಕಿನ ಮಧ್ಯವೂ ಧರ್ಮವನ್ನು ಮರೆತವರಲ್ಲ. ಈ ಹಿನ್ನೆಲೆಯಲ್ಲಿ ಅವರ ದೈವಭಾವ ಮಠ ದೇವಾಲಯಗಳು, ಜಾತ್ರೆ-ಉತ್ಸವ ಇವೆಲ್ಲ ಅವಶ್ಯವಾಗಿ ಪರಿಗಣಿಸಲ್ಪಡುತ್ತವೆ.

ಇಲ್ಲಿ ಮುಖ್ಯವಾಗಿ ಎರಡು ಅಂಶಗಳನ್ನು ಗಮನಿಸಬೇಕಾಗುತ್ತದೆ. ಸ್ಥಾಯಿಯಾಗಿರುವ ದೈವಭಕ್ತಿ ಮತ್ತು ಈ ಭಕ್ತಿಯ ಆಶ್ರಯದಲ್ಲಿ ಬೆಳೆದು ಬಂದ ಸಾಂಪ್ರದಾಯಿಕ ಆಚರಣೆಗಳು, ಈ ಆಚರಣೆಗಳೆಲ್ಲ ಪರಂಪರಾಗತ ನಂಬಿಕೆಗಳಾಗಿ ಮುಂದುವರೆದುಕೊಂಡು ಬಂದಿವೆ. ವರ್ಷಕ್ಕೊಮ್ಮೆ ನಡೆಯುವ ಜಾತ್ರೆ, ಉತ್ಸವಗಳಲ್ಲಿ ಜನ ಪಡೆಯುವ ಸಡಗರ, ತಾದಾತ್ಮ್ಯಗಳು ಅವರ ಬತ್ತದ ಜೀವನೋತ್ಸಾಹಕ್ಕೆ ಸಂಕೇತಗಳಾಗುತ್ತವೆ. ಇಂಥ ಸಂದರ್ಭಗಳು ಜಾನಪದರ ಕಲಾಭಿವ್ಯಕ್ತಿಯ ಮಾಧ್ಯಮಗಳಾಗುವುದೂ ವಿಶೇಷವೆನಿಸುತ್ತದೆ. ಬಯಲಾಟ, ನಾಟಕ, ಕರಡಿಮಜಲು, ಹಲಿಗೆ, ಡೊಳ್ಳಿನಹಾಡು, ಚೌಡಿಕೆಹಾಡು ಇವೆಲ್ಲ ಕಲಾವಿದರ ವೈಯಕ್ತಿಕ ಕಲಾಶಕ್ತಿಯ ಪ್ರತೀಕಗಳಾಗಿರುವಂತೆ ಸಂದರ್ಭಕ್ಕೆ ಮುದನೀಡಿ ಇಡೀಗ್ರಾಮವನ್ನು ಸಡಗರದಲ್ಲಿ ತೇಲಾಡುವಂತೆ ಮಾಡುತ್ತವೆ.

ಜಾನಪದರು ಪೂಜಿಸುವ ದೇವರನ್ನು ಮನೆದೇವರು, ಕುಲದೇವತೆ, ಗ್ರಾಮದೇವತೆ, ಸೀಮಿದೇವರು ಎಂದು ವರ್ಗೀಕರಿಸಬೇಕಾಗುತ್ತದೆ. ಪರಂಪರಾಗತವಾಗಿ ಹಿರಿಯರಿಂದ ಪೂಜಿಸಲ್ಪಡುವ ಕುಟುಂಬದ ದೇವರು "ಮನೆದೇವರು" ಎನ್ನಿಸುತ್ತದೆ. ಈ ದೇವರು ತಾವು ವಾಸಿಸುವ ಊರಲ್ಲಿಯೇ ಇರಬೇಕೆಂದಿಲ್ಲ. ಯಾವುದೋ ದೂರದ ಊರಲ್ಲಿ ಇರಬಹುದು. ವರ್ಷಕ್ಕೊಮ್ಮೆ ಎರಡುಬಾರಿ ಹೋಗಿ ಪೂಜೆಸಲ್ಲಿಸಿ

ಬರುವುದುಂಟು. 'ಕುಲದೇವತೆ' ಜಾತಿಯನ್ನು ಪ್ರತಿನಿಧಿಸುವ ದೇವರು, ಗ್ರಾಮದೇವತೆ ಊರಲ್ಲೇ ಇದ್ದು ಎಲ್ಲ ವರ್ಣ ವರ್ಗದವರಿಗೆ ಸಮನಾದ ದೇವರು. ಈ ದೇವರ ಜಾತ್ರಿ, ಉತ್ಸವ ಸಾಮಾನ್ಯವಾಗಿ ವರ್ಷಕ್ಕೊಮ್ಮೆ ವಿಜೃಂಭಣೆಯಿಂದ ಜರುಗುವುದುಂಟು. ಸಮಸ್ತ ಊರಿಗೆ ಊರೇ ಈ ಸಡಗರದಲ್ಲಿ ಪಾಲುಗೊಳ್ಳುತ್ತದೆ. 'ಸೀಮಿದೇವರು' ಎನ್ನುವುದು ತಾವು ಕೃಷಿಗೈಯುವ ಜಮೀನು ಬೇಟೆಯಾಡುವ ಕಾಡುಗಳಲ್ಲಿ ಸ್ಥಾನ ಪಡೆಯುವುದುಂಟು. ಕಾಡು ಪ್ರಾಣಿಗಳಿಂದ, ಪ್ರಕೃತಿಯ ವಿಕೋಪಗಳಿಂದ ತಮ್ಮ ಭೂ ಸಂಪತ್ತು ನಾಶವಾಗದಿರಲಿ ಎಂಬುದೇ ಈ ಬಗೆಯ ದೇವರುಗಳ ಅದಿಷ್ಠಾನದ ಉದ್ದೇಶ.

ಗ್ರಾಮದ ತುಂಬ ತೋರುವ ಗುಡಿಗಳು ಗ್ರಾಮೀಣರ ದೈವ ಶ್ರದ್ಧೆಯನ್ನು ಪ್ರತಿನಿಧಿಸುತ್ತವೆ. ಈ ದೇವಾಲಯಗಳಲ್ಲಿ ನಿತ್ಯವೂ ಪೂಜೆ ನಡೆಯಲು ಬೇಕಾಗುವ ಅವಶ್ಯಕತೆಗಳಿಗೆಲ್ಲ ವ್ಯವಸ್ಥೆಯಿರುತ್ತದೆ. ಉಂಬಳಿಗಳು, ಸಾರ್ವಜನಿಕ ಸಹಾಯ ಈ ದೇವಾಲಯಗಳ ಪೂಜಾರಿಗಳ ಜೀವನೋಪಾಯಕ್ಕೆ ಆಸರೆಯಾಗಿವೆ, ಕೆಲವು ದೇವರು ನಿರ್ಧಿಷ್ಟ ಜಾತಿಯವರಿಂದ ಪೂಜಿಸಲ್ಪಡಬಹುದಾದರೂ ಅನ್ಯಜಾತಿಯವರು ಇಡಿಯಾಗಿ ಈ ದೇವರನ್ನು ತಿರಸ್ಕರಿಸುವುದಿಲ್ಲ. ಈ ನಿಟ್ಟಿನಲ್ಲಿ ಕಂಡುಬರುವ ಜಾನಪದರ ಮಾನಸಿಕ ಹದ ಮತ್ತು ಭಾವೈಕ್ಯತೆಯ ಬಗೆ ಅಭ್ಯಾಸ ಯೋಗ್ಯವೆನಿಸುತ್ತವೆ.

ಇದೆಲ್ಲ ಒಂದು ಬಗೆಯಲ್ಲಿ ಸಮಾಜಶಾಸ್ತ್ರ (Sociology) ಮಾನವಶಾಸ್ತ್ರ (Anthropology) ಮಾನಸಶಾಸ್ತ್ರ (Psychology) ತತ್ವಶಾಸ್ತ್ರ (Philosophy) ಮುಂತಾದವುಗಳಿಗೆಲ್ಲ ನೆರವಾಗಬಲ್ಲ ಪೂರಕ ಅಧ್ಯಯನವೆನಿಸುತ್ತದೆ. ಈ ರೀತಿಯಾಗಿ ಇವೆಲ್ಲ ಗ್ರಾಮ ಅಧ್ಯಯನದ ಸ್ವರೂಪದ ಪರಿವ್ಯಾಪ್ತಿಯಲ್ಲಿ ಬರುತ್ತವೆ.

# ಅಧ್ಯಾಯ ೨

# ಉಜ್ಜಿನಿ ಗ್ರಾಮದ ಪದನಿಷ್ಪತ್ತಿ

ಪ್ರತಿಯೊಂದು ಗ್ರಾಮ ನಿಷ್ಪತ್ತಿಗೆ ಐತಿಹಾಸಿಕ ಪರಂಪರೆ ಇರುತ್ತದೆ. ಅದಕ್ಕೆ ಪೂರಕ ಸಮಾಗ್ರಿಯಾಗಿ ಶಾಸನ ಸಾಹಿತ್ಯ ಕೃತಿಗಳು ಸಾಕ್ಷಿಯಾಗಿರುತ್ತವೆ. ಅಂತಹ ಪ್ರಮಾಣ ಪೂರ್ವ ದಾಖಲೆಗಳು ಉಜ್ಜಿನಿ ಮಠದ ವಿಚಾರಗಳ ಬಗ್ಗೆ ಹೇಳುತ್ತವೆ. ಆದರೆ ಉಜ್ಜಿನಿಯ ಗ್ರಾಮ ನಾಮದ ಬಗ್ಗೆ ವಿಶೇಷ ಆಧಾರಗಳು ಇಲ್ಲಾವಾದ್ದರಿಂದ, ಗ್ರಾಮನಾಮ ಇತಿಹಾಸಕ್ಕೆ ಭಾಷಿಕ ಮತ್ತು ಜಾನಪದೀಯ ಅಂಶಗಳೇ ಪ್ರಮುಖ ಆಧಾರಗಳಾಗಿವೆ. ಉಜ್ಜಿನ ಗ್ರಾಮ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನಲ್ಲಿದೆ. ಕೂಡ್ಲಿಗಿ ಪಟ್ಟಣದಿಂದ ನೈರುತ್ಯ ದಿಕ್ಕಿಗೆ ೩೦ ಕಿ.ಮೀ. ದೂರದಲ್ಲಿದೆ. ಈ ಸ್ಥಳ ದಾವಣಗೇರಿ ಜಿಲ್ಲೆಯ ಜಗಳೂರು ತಾಲೂಕಿನ ಗಡಿ ಪ್ರದೇಶವಾಗಿದೆ.

ಕರ್ನಾಟಕ ಗೆಜೆಟಿಯರ್‌ನ ಉಲ್ಲೇಖದಂತೆ ಪುರಾಣದಲ್ಲಿ ಉಜ್ಜಿನಿಗೆ "ರತ್ನಪುರ" ಎಂಬ ಹೆಸರಿತ್ತು. ಉಜ್ಜಿನಿ ಮೂಲತಃ ಜೈನರ ಆಲಯವಾಗಿದ್ದು. ಕ್ರಮೇಣ ಜೀನಾಲಯ ಜೀನರ ಉಗಮ ಉಜ್ಜಿನಿ ಎಂದಾಗಿರಬೇಕು ಎಂಬುದು ಉಜ್ಜಿನಿ ರುದ್ರಪ್ಪ ಕನ್ನಡಪ್ರಭ ಉಪಸಂಪಾದಕರ ಅಭಿಪ್ರಾಯವಾಗಿದೆ. ಇದುವರೆಗೂ ದೊರೆತ ಶಿಲಾಶಾಸನ ತಾಮ್ರುಶಾಸನಗಳಲ್ಲಿ ಎಲ್ಲಿಯೂ ಉಜ್ಜಿನಿ ಎಂದು ಉಲ್ಲೇಖವಿಲ್ಲ. ಇಂದಿಗೂ ಉಜ್ಜಿನಿ ಎಂಬ ಹೆಸರು ಬಂದ ಬಗ್ಗೆ ಬಹಳಷ್ಟು ಜಿಜ್ಞಾಸೆಗಳಿವೆ.

## ಉಜ್ಜಿನಿ ಗ್ರಾಮನಾಮದ ಕಥೆ

ಕ್ರಿ.ಶ. ೧೧ನೇ ಶತಮಾನದಲ್ಲಿ ಮಧ್ಯಪ್ರದೇಶದ ಉಜ್ಜಯಿನಿ ಪೀಠಾಚಾರ್ಯರಾಗಿದ್ದವರು. ಶಂಭುಮುನಿ ಶಿವಾಚಾರ್ಯ. ಅಲ್ಲಿಯ ದೊರೆ ವೀರಸೇನ ಮತದಲ್ಲಿ ಜೈನನಾಗಿದ್ದರಿಂದ ವೀರಶೈವ ಧರ್ಮಿಯರನ್ನು ಮತ್ತು ಮಠವನ್ನು ನಾಶಮಾಡಬೇಕೆಂದು ಯುದ್ಧ ಸಾರಿದ. ಯುದ್ಧದಲ್ಲಿ ವೀರಶೈವ ಮತೀಯರು ವೀರಾವೇಶದಿಂದ ಕಾದಾಡಿ ಜಯಶೀಲರಾದರು. ಯುದ್ಧದಲ್ಲಾದ ಅನಾಹುತ ಕಗ್ಗೊಲೆಗಳನ್ನು ನೋಡಿ. ಶಂಭುಮುನಿ ಶಿವಾಚಾರ್ಯರಿಗೆ ಅಪಾರ ವ್ಯಥೆಯಾಗಿ, ಗೆದ್ದ ರಾಜ್ಯವನ್ನು ವೀರಸೇನನಿಗೆ ಹಿಂದುರುಗಿಸಿ ತಮ್ಮ ಪಟ್ಟದ ಶಿಷ್ಯರೂ ಆದ ಮರುಳಾರಾಧ್ಯರಿಗೆ ಅಧಿಕಾರ ಸೂತ್ರವನ್ನು ಅನುಗ್ರಹಿಸಿದರು. ನಂತರ ಮರುಳಾರಾಧ್ಯ ಶಿವಾಚಾರ್ಯರು ಶಿಷ್ಯರೊಡಗೂಡಿ ದೇಶಾಟನ ಕೈಗೊಂಡು. ಉಜ್ಜನಿ ಬಳಿ ತಪಸ್ಸನ್ನಾಚರಿಸುತ್ತಿರುವಾಗ ಪಾಂಡ್ಯರಾಜ ಅಲ್ಲಿಗೆ ಬಂದು ತನ್ನ ಕೃತಜ್ಞತೆಯನ್ನು ಅರ್ಪಿಸಿದ. ಕಾರಣ ಪಾಂಡ್ಯರಾಜ ಪೀಠಾಚಾರ್ಯರ ಆರ್ಶೀವಾದದಿಂದ ಸಂತಾನ ಪಡೆದಿದ್ದ, ನಂತರ ಶ್ರೀಗಳವರ ಅಭೀಷ್ಟದಂತೆ ಪಾಂಡ್ಯರಾಜ ಅಲ್ಲಿಯೇ ಒಂದು ಸದ್ಧರ್ಮ ಸಿಂಹಾಸನ ಮಠವನ್ನು ಕಟ್ಟಿಸಿಕೊಟ್ಟನು.

ಮರುಳಾರಾಧ್ಯರು ತಮ್ಮ ಮೂಲ ಸ್ಥಳದ ಹೆಸರನ್ನೇ ಈಗಿನ ಸಿಂಹಾಸನ ಇರುವ ಸ್ಥಳಕ್ಕೆ "ಉಜ್ಜಿನಿ" ಎಂದೇ ನಾಮಕರಣ ಮಾಡಿದರು.

ಉಜ್ಜಿನಿಯ ಸದ್ಧರ್ಮ ಸಿಂಹಾಸನ ಮೂಲಸ್ಥಾನ ಮಧ್ಯಪ್ರದೇಶದಲ್ಲಿರುವ ಕ್ಷಿಪ್ರ ನದಿತೀರದ ಉಜ್ಜಯಿನಿ ವಟುಸಿದ್ದೇಶ್ವರ. ಮಹಾಲಿಂಗ ದೇವಾಲಯ ಮಧ್ಯಪ್ರದೇಶದಿಂದ ದಕ್ಷಿಣಕ್ಕೆ ಸ್ಥಳಾಂತರವಾಗಲು ಕಾರಣಗಳಿವೆ.

೧. ಸಾಮಾನ್ಯವಾಗಿ ಎಲ್ಲಾ ಪೀಠಾಚಾರ್ಯರು ಸಿದ್ಧಾಂತ ಸ್ಥಾಪನೆಗಾಗಿ ಧರ್ಮ ಪ್ರಚಾರಕ್ಕಾಗಿ, ಓಂದೂ ದೇಶದ ಉದ್ದಗಲಕ್ಕೂ ಪ್ರವಾಸ ಮಾಡುತ್ತಾ, ಅಲ್ಲಲ್ಲಿ ಸಂಸ್ಥಾನ ಮಠಗಳನ್ನು ಸ್ಥಾಪಿಸುವುದು ಪರಿಪಾಠ. ಅದರಂತೆ ಉಜ್ಜಯಿನಿ ಸದ್ಧರ್ಮ ಪೀಠದ ಪೀಠಚಾರ್ಯರು ಆ ಕಾಲಕ್ಕೆ ದಕ್ಷಿಣದಲ್ಲಿ ಅಲ್ಲದೆ ಶ್ರೀಲಂಕಾ ದ್ವೀಪದಲ್ಲಿ ಸಹ ಅನೇಕ ಸಂಸ್ಥಾನ ಮಠಗಳನ್ನು ಸ್ಥಾಪಿಸಿದ್ದು ಹಾಗೆ ಈ ಉಜ್ಜಯಿನಿ ಅಭಿನವ ಉಜ್ಜಯಿನಿ ಎಂದು ಹೆಸರು ಪಡೆದುಕೊಂಡಿದೆ. ಆದರೆ ಎಲ್ಲಿಯೂ ಉಜ್ಜಯಿನಿ ಎಂದು ಉಲ್ಲೇಖವಿಲ್ಲ. ಆದರೆ ಕ್ರಿ.ಶ. ೧೬೬೦ರ ಶಾಸನ ಹರಪನಹಳ್ಳಿ ತಾ. ಕಡಬಗೇರಿ ಈ ಶಾಸನದಲ್ಲಿ ಮಾತ್ರ ಉಜ್ಜನಿ ಎಂದು ಪ್ರಸ್ತಾಪವಾಗಿರುವುದನ್ನು ಕಾಣಬಹುದಾಗಿದೆ.[೧]

ಉಜ್ಜಿನಿ-ಉಜ್ಜಯಿನಿ ಈ ಎರಡು ಪದನಾಮದ ಬಗ್ಗೆ ಬಹಳಷ್ಟು ಗೊಂದಲಗಳಿವೆ. ಎಲ್ಲಾ ಸರ್ಕಾರಿ ಪತ್ರಗಳಲ್ಲಿ ಕಛೇರಿಯ ಬರಹಗಳಲ್ಲಿ ಉಜ್ಜಿನಿ ಎಂದೆ ನಮೋದಿಸಿದ್ದಾರೆ. ಆದ್ದರಿಂದ ಇದು ಉಜ್ಜಿನಿ ಎಂದೇ ಇರಬೇಕು.

ಉಜ್ಜಿನಿ ಜಗದ್ಗುರು ಮರುಳಸಿದ್ದ ರಾಜದೇಶಿಕೇಂದ್ರ ಸ್ವಾಮಿಗಳು ಇದು ಉಜ್ಜಿನಿ ಅಲ್ಲ, ಉಜ್ಜಯಿನಿ ಎಂದು ಕರೆಯಬೇಕು. ಇದು ಉಜ್ಜಯಿನಿ ಎಂಬುದು ಇವರ ಅಭಿಪ್ರಾಯ. ಇತ್ತೀಚೆಗೆ ಉಜ್ಜಯಿನಿ ಎಂಬ ಬರಹೆಗಳ ಕೂಡ ಕಾಣಸಿಗುತ್ತೇವೆ.

## ಅ. ಉಜ್ಜನಿ ಪೀಠ ಪರಂಪರೆ

### ಮರುಳಾರಾಧ್ಯರು

ಮರುಳಾರಾಧ್ಯರು ಶಿವನ ಅಪ್ಪಣೆಯ ಮೇರೆಗೆ ವೀರಶೈವ ಮತ ಸಂಸ್ಥಾನೆಗಾಗಿ ಕ್ಷಿಪ್ರಾನದಿಯ ತಟದಲ್ಲಿರುವ ಸಿದ್ದೇಶ್ವರ ಲಿಂಗದಿಂದ ಪ್ರತಿಯೊಂದು ಯುಗದಲ್ಲೂ ಅವತರಿಸುತ್ತಾ ಕೃತಯುಗದಲ್ಲಿ ವ್ಯಕ್ಷರ ಶಿವಾಚಾರ್ಯ, ತ್ರೇತಾಯುಗದಲ್ಲಿ ದ್ವಿವಕ್ತ್ರ ಶಿವಾಚಾರ್ಯ, ದ್ವಾಪರಯುಗದಲ್ಲಿ ದಾರಕು ಶಿವಾಚಾರ್ಯ, ಮತ್ತು ಕಲಿಯುಗದಲ್ಲಿ ಮರುಳಾರಾಧ್ಯ ಶಿವಾಚಾರ್ಯ ಎಂಬ ಹೆಸರುಗಳು, ಇವರಿಗೆ ಇದ್ದುದಾಗಿ ಗ್ರಂಥಗಳಿಂದ ತಿಳಿದು ಬರುತ್ತದೆ. ಈ ಪೀಠದ ದ್ವಾಪರಯುಗದ ಆಚಾರ್ಯರಾದ ಜಗದ್ಗುರು ದಾರುಕಾಚಾರ್ಯರು ನೈಮಿಪಾರಣ್ಯದಲ್ಲಿ ವಾಸ ಮಾಡುತ್ತಿರುವ ಶ್ರೀದದೀಚಿ ಶಿವಾದ್ವೈತ ಸಿದ್ಧಾಂತವನ್ನು ಭೋಧಿಸಿ, ಸಕಲ ಶಿಷ್ಯ ಸಮೇತರಾದ ಅವರನ್ನು ಕೃತಾರ್ಥರನ್ನಾಗಿ ಮಾಡಿದರು.

"ತದ್ವೈನ್ಮರುಳಸಿದ್ದಸ್ಯ ಮಟುಕ್ಷೇತ್ರ ಮಹತ್ತರೆ
ಸಿದ್ದೇಶ ಲಿಂಗಾಜ್ಞನನೆಂ ಸ್ಥಾನ ಮುಜ್ಞಯನೀಪುರೇ"

ಸ್ವಾಯಂಭುವಾಗುಮದ ಈ ವಚನಾಮನುಸಾರವಾಗಿ ಕಲಿಯುಗದ ಆಚಾರ್ಯರಾದ ಮರುಳಾರಾಧ್ಯರು. ಅಂದು ಮಾಳವ ದೇಶವೆಂದು ಪ್ರಸಿದ್ಧವಾದ ಇಂದಿನ ಮಧ್ಯಪ್ರದೇಶದ ಕ್ಷಿಪ್ರಾನದಿಯ ದಡದಲ್ಲಿರುವ, ಮಹಾಕಾಲ ಉಜ್ಜಿನಿಯ ವಟುಕ್ಷೇತ್ರದ ಪ್ರಸಿದ್ಧವಾದ ಸಿದ್ದೇಶ್ವರ ಮಹಾಲಿಂಗದಿಂದ ಪ್ರಾದುರ್ಭವಿಸಿ ವೀರಶೈವ ಧರ್ಮೋಪದೇಶಕ್ಕಾಗಿ, ಒಂದು ಪೀಠವನ್ನು ಸ್ಥಾಪಿಸಿದರು. ಅದುವೇ ಸದ್ದರ್ಮ ಸಿಂಹಾಸನವೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆಯಿತು. ಮಹಾಕಾಲೇಶ್ವರ ಜ್ಯೋರ್ತಿಲಿಂಗದಿಂದಲೂ ಭಕ್ತರ ಪಾಪವನ್ನು ಕ್ಷಿಪ್ರದಲ್ಲಿಯೇ ನಾಶಪಡಿಸುವ ಮಹಿಮೆಯಿಂದ ಕೂಡಿದ ಕ್ಷಿಪ್ರ ನದಿಯಿಂದಲೂ ಸದ್ದರ್ಮವನ್ನು ಉಪದೇಶಿಸುವುದು ಈ ಗುರುಪೀಠದಿಂದಲೂ ಈ ಉಜ್ಜಿನಿಯಲ್ಲಿ ಶ್ರೌತಪಾಲ ಮತ್ತು ಬಾನುಮತಿ ಎಂಬ ರಾಜದಂಪತಿಗಳು ಪ್ರಜಾಪಾಲನೆಯನ್ನು ಮಾಡುತ್ತಿದ್ದರು. ಒಂದು ಸಾರಿ ಶ್ರೌತಪಾಲರಾಜನು ಸ್ವರ್ಗದ ಅಭಿಲಾಷೆಯಿಂದ ಅಶ್ವಮೇಧ ಯಾಗವನ್ನು ಮಾಡಲು ದ್ಯುಕ್ತನಾಗಿ, ಯಜ್ಞದಲ್ಲಿ ಸಂಭವಿಸಬಹುದಾದ ಪ್ರಾಣಹಿಂಸೆ, ಮಾಂಸಭಕ್ಷಣೆ, ಸುರಪಾನ, ಮತ್ತು ವ್ಯಭಿಚಾರಾದಿಗಳ ಬಗ್ಗೆ, ರಾಜನಿಗೆ ಅರಿವನ್ನುಂಟು ಮಾಡಿದರು. ನಂತರ ಉಜ್ಜಿನಿ ಸದ್ದರ್ಮ ಮರುಳಾರಾಧ್ಯರು ರಾಜ ದಂಪತಿಗಳಿಗೆ ಶಿವದೀಕ್ಷೆಯನ್ನು ಅನುಗ್ರಹಿಸಿ, ಸಾತ್ವಿಕ ಪೂಜಾ ವಿಧಾನವನ್ನು ತಿಳಿಸಿ, ಅವರಿಗೆ ವೀರಶೈವ ಧರ್ಮದ ಪ್ರಮುಖ ತತ್ವಗಳಾದ ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳ ಅರಿವನ್ನು ಮಾಡಿಕೊಟ್ಟರು. ನಂತರ ಹಿಮಾಲಯದ ಗಂಗಾ-ಯಮುನಾ ನದಿಗಳ ಮಧ್ಯಭಾಗದಲ್ಲಿ ವಿರಾಜಿಸುವ ದಾರುಕವನಕ್ಕೆ ಬಂದು, ಅಲ್ಲಿಯೇ ಋಷಿ ಮುನಿಗಳೆಲ್ಲ ಶಿವದ್ವೈತ ಸಿದ್ಧಾಂತವನ್ನು ಬೋಧಿಸಿ, ಅಲ್ಲಿಂದ ಕಾಶೀ ಕ್ಷೇತ್ರಕ್ಕೆ ಹೋಗುತ್ತಾರೆ. ಕಾಶಿಯಲ್ಲಿ ವಿಶ್ವಾರಾಧ್ಯರನ್ನು ಸಂದರ್ಶಿಸಿ ಕಾಶಿಯಲ್ಲಿಯೇ ಯೋಗ ಸಮಾಧಿಯಲ್ಲಿ ಲೀನರಾಗುತ್ತಾರೆ. ಶಿವಯೋಗ ಸಮಾಧಿಯಿಂದ ಎಚ್ಚರಾದ ಬಳಿಕ ವಿಶ್ವಾರಾಧ್ಯರ ಅಪ್ಪಣೆಯನ್ನು ಪಡೆದು. ಶ್ರೀ ಶೈಲ ಮಲ್ಲಿಕಾರ್ಜುನ ದೇವಾಲಯಕ್ಕೆ ಹೋಗಿ, ಅಲ್ಲಿಯ ಸೂರ್ಯ ಸಿಂಹಾಸನಾದೀಶ್ವರ ಪಂಡಿತಾರಾಧ್ಯರೊಡನೆ ಧಾರ್ಮಿಕ ಪರ್ಯಾಲೋಚನೆಯನ್ನು ಮಾಡಿ, ಅಲ್ಲಿಯ ಋಷಿ ಮುನಿಗಳಿಗೆ ಶಿವಾದ್ವೈತ ತತ್ವವನ್ನು ಸಂಸ್ಥಾಪಿಸಿ ಶಿವಭಕ್ತಿಯ ಪ್ರಚಾರವನ್ನು ಗೈಯುತ್ತಾರೆ. ನಂತರ ಉಜ್ಜಯಿನಿ ಕ್ಷೇತ್ರಕ್ಕೆ ದಯ ಮಾಡಿಸಿ. ಅಕ್ಷಯ ತೃತಿಯ ಶುಭಮಹೂರ್ತದಲ್ಲಿ. ಮುಕ್ತಿ ಮುನಿಗಳಿಗೆ ಪಟ್ಟಾಧಿಕಾರವನ್ನು ವಹಿಸಿ. ಮರುಳಾರಾಧ್ಯರು ಪುನಃ ವಟುಕ್ಷೇತ್ರದ ಸಿದ್ದೇಶ್ವರ ಲಿಂಗದಲ್ಲಿಯೇ ಲೀನರಾದರು. ಮುಕ್ತಿ ಮುನಿಗಳು ಪಟ್ಟಾಧಿಕಾರವನ್ನು ಹೊಂದಿ ೩೦೦ ವರ್ಷಗಳ ಪರ್ಯಾಂತ ಪೀಠವನ್ನಲಂಕರಿಸಿ, ಅಂತಿಮ ಸಮಯದಲ್ಲಿ ಸಿದ್ದಮುನಿಗಳಿಗೆ ಪೀಠಾಧಿಕಾರವನ್ನು ಒಪ್ಪಿಸಿ ಲಿಂಗೈಕ್ಯರಾದರು. ಹೀಗೆ ಈ ಪೀಠ ಪರಂಪರೆಯಲ್ಲಿ ಸಿದ್ದಮುನಿಗಳು ೨೦೦ ವರ್ಷ ತಮ್ಮ ತರುವಾಯ ಇಮ್ಮಡಿ ಮುಕ್ತಿ ಮುನಿಗಳಿಗೆ ಪೀಠಾಧಿಕಾರವನ್ನು ಕೊಟ್ಟು ಲಿಂಗೈಕ್ಯರಾದರು.

ಇದೇ ಪ್ರಕಾರ ಇಮ್ಮಡಿ ಮುಕ್ತಿ ಮುನಿಗಳು ೫೦ ವರ್ಷ, ಶಕ್ತಿ ಮುನಿಗಳು ೨೦೦ ವರ್ಷ. ಇಮ್ಮಡಿ ಸಿದ್ದಮುನಿಗಳು ೪೦ ವರ್ಷ. ಇಮ್ಮಡಿ ಶಾಂತಮುನಿಗಳು ೯೦ ವರ್ಷ. ಮುಮ್ಮಡಿ ಸಿದ್ದಮುನಿಗಳು

೫೫ ವರ್ಷ. ಸಾಂಬ ಮುನಿಗಳು ೧೦೦ ವರ್ಷ. ಶಿವ ಮುನಿಗಳು ೨೦ ವರ್ಷ ಮತ್ತು ಈಶಾನ್ಯ ಮುನಿಗಳು ೭೫ ವರ್ಷ. ಧರ್ಮ ಸಿಂಹಾಸನಾಧೀಶರಾಗಿ ಮಧ್ಯಪ್ರದೇಶದಲ್ಲಿ ವೀರಶೈವ ಧರ್ಮವನ್ನು ಬಹಳಷ್ಟು ಪ್ರಚಾರಗೊಳಿಸಿದರು.

**ಸದ್ಧರ್ಮ ಪೀಠದ ಸ್ಥಳಾಂತರ**

ಈಶಾನ್ಯ ಮುನಿಗಳ ತರುವಾಯ ಶಂಬು ಮುನಿಗಳು ಲಿಂಗೈಕ್ಯರಾದ ನಂತರ, ಮರುಳುಸಿದ್ಧರು ಜೈನರಾಜರ ಉಪದ್ರವಕ್ಕಾಗಿ ಮಧ್ಯಪ್ರದೇಶದ ಉಜ್ಜಯಿನಿಯ ಪರಿಸರವನ್ನು ತ್ಯಾಗಮಾಡಿ, ಶಿಷ್ಯ ಸಮೇತರಾಗಿ ಮಹಾರಾಷ್ಟ್ರದ ವಿಭಿನ್ನ ಸ್ಥಳಗಳಲ್ಲಿ ಸಂಚರಿಸುತ್ತಾ, ಎಲ್ಲಿಲ್ಲೆಯ ಭಕ್ತರ ಸಹಯೋಗ ಸಹಕಾರಗಳಿಂದ ಮಠಗಳನ್ನು ನಿರ್ಮಿಸಿ, ಅಲ್ಲಲ್ಲಿ ಒಬ್ಬೊಬ್ಬ ಶಿಷ್ಯರನ್ನು ಇರಿಸುತ್ತಾ, ಜ್ಯೋತಿರ್ಲಿಂಗಗಳ ಸ್ಥಾನಗಳನ್ನು ಸಂದರ್ಶಿಸಿ ಕೊಲ್ಹಾಪುರ ಸಮೀಪದ "ಸಿದ್ಧಗಿರಿ" ಎಂಬ ಸ್ಥಳಕ್ಕೆ ಬರುತ್ತಾರೆ. ಮರುಳಸಿದ್ಧರು ಹೀಗೆ ಮಹಾರಾಷ್ಟ್ರದ ಅನೇಕ ಭಾಗಗಳಲ್ಲಿ ಸಂಚರಿಸಿದುದರಿಂದ ಮಹಾರಾಷ್ಟ್ರದಲ್ಲಿ ಉಜ್ಜಯಿನಿ ಶಾಖಾ ಮಠಗಳು ಅಧಿಕವಾಗಿರುತ್ತವೆ.

ಮರುಳಸಿದ್ಧರು ಸಿದ್ಧಗಿರಿಗೆ ಆಗಮಿಸಿದಾಗ ಅಲ್ಲಿ ರೇವಣಸಿದ್ಧರ ಪರಿಚಯವಾಗುತ್ತದೆ. ಇಂದಿನ ಸಿದ್ಧಗಿರಿ ಮಠವು ರಂಭಾಪುರಿ ಶಾಖಾ ಮಠವಾಗಿರುತ್ತದೆ. ಮರುಳಸಿದ್ಧರು ಉಜ್ಜಿನಿ ಪೀಠಕ್ಕೆ ಬಂದೊದಗಿದ ವಿಪತ್ತನ್ನರಿತ ರೇವಣಸಿದ್ಧರೂ ಮರುಳಸಿದ್ಧರಿಗೆ ಸಾಂತ್ವನವನ್ನು ಹೇಳಿ, ಕರ್ನಾಟಕ ಪ್ರದೇಶದ ಕೊಟ್ಟೂರು ಬಳಿಯಲ್ಲಿಯೇ ಉಜ್ಜಿನಿ ಎಂಬ ಹೊಸ ಪಟ್ಟಣವನ್ನು ನಿರ್ಮಾಣಗೊಳಿಸಿ. ಅಲ್ಲಿಯೇ ಪೀಠವನ್ನು ಪುನಃ ಸ್ಥಾಪಿಸಲು ಸಲಹೆಯನ್ನು ಕೊಡುತ್ತಾರೆ. ರೇವಣಸಿದ್ಧರ ಆದೇಶದಂತೆ ಮರುಳಸಿದ್ಧರು ಕೊಲ್ಹಾಪುರದ ಮಾಯಾದೇವಿಯ ಗರ್ವಾಪಹರಣವನ್ನು ಮಾಡಿ. ಅಪಾರ ಕೀರ್ತಿಯನ್ನು ಸಂಪಾದಿಸಿದರು. ಅಲ್ಲದೇ ಅಲ್ಲಿಯ ಕರಟಾಸುರನಿಗೆ ಮತ್ತು ಅವನ ಪರಿವಾರದವರಿಗೆಲ್ಲ ಶಿವದೀಕ್ಷೆಯನ್ನು ಮಾಡಿ ಅನುಗ್ರಹಿಸಿದರು. ನಂತರ ಓರಂಗಲ್ಲಿಗೆ ಹೋಗಿ ಅಲ್ಲಿಯ ಕಾಕತೀಯ ರಾಜವಂಶದ ಗಣಪತಿ ರಾಜನನ್ನು ಮತ್ತು ಹೊಸ ಕಲ್ಯಾಣದ ಸೋಮೇಶ್ವರ ರಾಜನನ್ನು ಕಂಡರು. ಅವರ ಸಹಾಯದಿಂದ ಶ್ರೀ ಜಕ್ಕಣಾಚಾರ್ಯರ ಶಿಲ್ಪ ಸೇವೆಯಿಂದ ಹೊಸದಾಗಿ ಸ್ಥಾಪಿಸಲ್ಪಟ್ಟ ಉಜ್ಜಿನಿಯಲ್ಲಿ ಸದ್ಧರ್ಮ ಪೀಠವನ್ನು ನಿರ್ಮಾಣಗೊಳಿಸಿ, ಆ ಪೀಠದಲ್ಲಿ ಮೂಲ ಮರುಳಾರಾಧ್ಯರ ತರುವಾಯದ ಹದಿನಾಲ್ಕು ಜನ ಗುರುಪರಂಪರೆಯ ಮೂರ್ತಿಗಳನ್ನು ಮತ್ತು ಮೂಲ ಮರುಳಾರಾಧ್ಯರ ಒಂದು ಲಿಂಗವನ್ನು ಸಂಸ್ಥಾಪಿಸಿದರು. ಈ ಪೀಠದಲ್ಲಿಯ ಒಳಭಾಗವು ಅನೇಕ ಕಲಾಕೃತಿಯಿಂದ ಕೂಡಿಕೊಂಡಿವೆ. ಅಂತೆಯೇ **"ಹಂಪೆಯ ಗುಡಿ ಹೊರಗೆ ನೋಡಬೇಕು ಉಜ್ಜಿನಿಯ ಮಠದ ಒಳಗೆ ನೋಡಬೇಕು"** ಎಂಬುದು ಇಂದಿಗೂ ಗಾದೆಯ ಮಾತಾಗಿದೆ.

ಹೀಗೆ ವಿನೂತನವಾಗಿ ನಿರ್ಮಾಣಗೊಂಡ ಕರ್ನಾಟಕದ ಉಜ್ಜಿನಿ ಸದ್ಧರ್ಮ ಸಿಂಹಾಸನಕ್ಕೆ ಶ್ರೀ ಮರಳಸಿದ್ಧರನ್ನು ಪೀಠಾಧ್ಯಕ್ಷರನ್ನಾಗಿ ಮಾಡಲಾಯಿತು. ಈ ಮಂಗಲ ಕಾರ್ಯಕ್ಕೆ ರೇವಣಸಿದ್ಧರು ಪಂಡಿತಾರಾಧ್ಯರು ಬಂದಿದ್ದರು ಹಾಗೂ ರಾಷ್ಟ್ರಕೂಟ ಓರಂಗಲ್ ಪುರಿಗಳ ಭೂಪಾಲರೂ ಆಗಮಿಸಿ,

ತಮ್ಮ ಭಕ್ತಿ ಕಾಣಿಕೆಯನ್ನು ಸಮರ್ಪಿಸಿದರಲ್ಲದೇ ಭುವನೈಕಮಲ್ಲ ಸೋಮೇಶ್ವರನು ಸನ್ಮಾನ ಪೂರ್ವಕವಾಗಿ ೧೨೦ ಮಠಗಳನ್ನು ತನ್ನ ರಾಜ್ಯದಲ್ಲಿಯೇ ಉಂಬಳಿಯಾಗಿ ಕೊಟ್ಟನು.

ಈ ರೀತಿಯಾಗಿ ವೈಭವದ ಅಧಿಕಾರವನ್ನು ಹೊಂದಿದ ನಂತರ ಭಕ್ತವೃಂದ ಮತ್ತು ಅನೇಕ ಮಹಾರಾಜರ ಬಯಕೆಗಳನ್ನು ಈಡೇರಿಸುತ್ತಾ ಓರಂಗಲ್ಲು, ಹಂಪೆ, ಕೂಡಲಸಂಗಮ, ಕಪ್ಪತಗುಡ್ಡ, ಹರಪುರಂ, ಮುಂತಾದ ಸ್ಥಳಗಳಲ್ಲಿ ಸಂಚರಿಸಿ ವೀರಶೈವ ಧರ್ಮೋಪದೇಶವನ್ನು ಮಾಡುತ್ತಿರುವಾಗ ಬಹಳಷ್ಟು ಜೈನ ಧರ್ಮೀಯರು ಇವರಿಂದ ಲಿಂಗದೀಕ್ಷೆಯನ್ನು ಪಡೆದರು.

ಮರುಳಸಿದ್ಧರು ೧೭೦ ವರ್ಷಗಳವರೆಗೆ ಉಜ್ಜಿನಿಯ ಸದ್ಧರ್ಮ ಸಿಂಹಾಸನಾಧಿಪತಿಗಳಾಗಿದ್ದು. ಕೊನೆಗೆ ಸಿದ್ಧ ಪಂಡಿತರಿಗೆ ಪಟ್ಟವನ್ನು ವಹಿಸಿ ತಾವು ಲಿಂಗೈಕ್ಯರಾದರು. ವಿನೂತನವಾದ ಈ ಉಜ್ಜಿನಿ ಪೀಠದ ಗುರುಪರಂಪರೆಯಲ್ಲಿ ಸಿದ್ಧಲಿಂಗಾರ್ಚಾಯರು ೪೫ ವರ್ಷ ಸಿದ್ಧೇಶ್ವರಾಚಾರ್ಯರು ೮೦ ವರ್ಷ ಮತ್ತು ಸಿದ್ಧನಾಥರಾಧ್ಯರು ೩೦ ವರ್ಷ ಹೀಗೆ ಸಿಂಹಾಸನಾಸೀನರಾಗಿ ಪೀಠದ ಘನತೆಯನ್ನು ಬೆಳೆಸಿದರು. ಸಿದ್ಧನಾಥರಾಧ್ಯರು ತಮ್ಮ ಅಂತ್ಯಕಾಲದಲ್ಲಿ ಹೊಲಯ ಸಿದ್ಧನಂಜೇಶ್ವರ ವಂಶದ ಮರುಳಾಧ್ಯರಿಗೆ ಪಟ್ಟವನ್ನು ಕಟ್ಟಿ ಲಿಂಗೈಕ್ಯರಾದರು. ಪಟ್ಟಕ್ಕೆ ಬಂದ ಮರುಳಾಧ್ಯರು ಯೋಗ ಸಾಮರ್ಥ್ಯ ಉಳ್ಳವರಾದ್ದರಿಂದ ಅನೇಕ ಭಕ್ತರ ಬಯಕೆಗಳನ್ನು ಸಹಜವಾಗಿ ಈಡೇರಿಸುತ್ತಿದ್ದರು. ಇವರ ಅನುಗ್ರಹದಿಂದಲೇ ಕಗ್ಗಲಿಪುರದ ಗೌಡನಿಗೆ ಪುತ್ರ ಸಂತಾನ ಪ್ರಾಪ್ತವಾಯಿತು. ಅದರಂತೆ ತರೀಕೆರೆಯ ಸೋಮಣ್ಣನೆಂಬ ಕುರುಬಗೌಡನಿಗೆ ಪುತ್ರ ಪ್ರಾಪ್ತಿಯಾಯಿತು. ಈ ಕೂಸಿಗೆ ಅಮೋಘಸಿದ್ಧನೆಂದು ನಾಮಕರಣ ಮಾಡಿದರು. ಇವನಿಗೆ ಶಿವದೀಕ್ಷೆಯನ್ನು ಕೊಟ್ಟು ಅವನನ್ನು ಕರೆತಂದು ಹಿರಿಯ ಕುಂಬಿಯ ವೀರಶೈವ ಕುರಬರಿಗೆ ಅಮೋಘಸಿದ್ಧನನ್ನು ಗುರುವನ್ನಾಗಿ ಮಾಡಿದರು.

ಅನಂತರ ಕಗ್ಗಲ್ಲುಪುರದಲ್ಲಿ ಮರುಳಸಿದ್ಧ ಮೂರ್ತಿಯನ್ನು ಸಂಸ್ಥಾಪಿಸಿ, ಬೇತೂರು ಆನಗೋಡುಗಳಲ್ಲಿ ಪ್ರಯಾಣ ಮಾಡುತ್ತಾ, ಸಿದ್ಧಮಲ್ಲೇಶ್ವರ ಎಂಬುವರಿಗೆ ಪೀಠದ ಉತ್ತರಾಧಿಕಾರವನ್ನು ವಹಿಸಿ ತಾವು ಲಿಂಗೈಕ್ಯರಾದರು.

ಸಿದ್ಧಮಲ್ಲೇಶ್ವರರು ತಮ್ಮ ತಪೋಬಲದಿಂದ ಬರಗಾಲದಲ್ಲಿ ಮಳೆ ಕರಿಸಿದ್ದರಿಂದ "ಮಳೆಮಲ್ಲೇಶ್ವರ" ಎಂತಲೂ ಸಂತಾನ ಇಲ್ಲದವರಿಗೆ ಸಂತಾನ ಕರುಣಿಸಿದ್ದರಿಂದ "ಸಂತಾನ ಮಲ್ಲೇಶ್ವರ"ರೆಂತಲೂ ಪ್ರಸಿದ್ಧ ಪಡೆದವರು. "ಸಾವಿರಕ್ಕೊಂದು ಸಂತಾನ" ಎಂದು ಸಾರಿದ್ದರಿಂದ ಬಹಳಷ್ಟು ಜನರು ಸಾವಿರ ಹೊನ್ನು ಕೊಟ್ಟು ಸಂತಾನವನ್ನು ಪಡೆದರು. ಇವರಲ್ಲಿ ಉಜ್ಜಿನಿಯ ಬಿಜ್ಜೇಗೌಡ, ಬಾಗಳಿ ಬಸವನಾಯಕ, ಓಂಕಾರನಾಯಕ, ಹರಪುರಿಯ ಬುಳ್ಳ ನೃಪಾಲ ಮತ್ತು ವಿಜಯನಗರ ಶ್ರೀ ಪ್ರೌಢರಾಯರು ಮುಖ್ಯರಾಗಿದ್ದಾರೆ. ಶ್ರೀ ಪ್ರೌಢರಾಯನಿಗೆ ಸಂತಾನವಾದ ನಂತರ ವಿಜನಗರದಲ್ಲಿ, ಶ್ರೀ ಜಗದ್ಗುರು ಸಿದ್ಧಮಲ್ಲೇಶ ಯೋಗಿಗಳ ತಪಃಪ್ರಭಾವದಿಂದ ಶಿವಭಕ್ತಿಯ ಪ್ರಚಾರವಾಯಿತು. ಅಂತೆಯೇ ಪ್ರೌಢರಾಯನ ಅಮಾತ್ಯನಾದ ಲಕ್ಕಣ ದಂಡೇಶನು 'ಶಿವತತ್ತ್ವ ಚಿಂತಾಮಣಿ' ಎಂಬ ಗ್ರಂಥವನ್ನು ಬರೆದು ಗುರುಗಳ ಅನುಗ್ರಹಕ್ಕೆ ಪಾತ್ರನಾದನು. ಮುಂದೆ ಒಮ್ಮೆ ಸಿಂದೋಗಿಪುರದ ಗೌಡನು ಸಾವಿರ ಹೊನ್ನುಕೊಟ್ಟು

ಸಂತಾನ ಪಡೆದದ್ದನ್ನು ಕಂಡು ಆತನ ಆಳು ಮಗನಾದ ಹೊಲೆಯ ಜಾತಿಯ ಮಾರನೂ ಸಂತಾನಾಪೇಕ್ಷಿಯಾಗಿ ಗುರುಗಳನ್ನು ಬೇಡಿಕೊಂಡಾಗ, ಗುರುವಿನ ಅನುಗ್ರಹದಿಂದ ಸಾವಿರ ಕುಳ್ಳುಗಳನ್ನು ಕೊಟ್ಟು ದಾಸೋಹ ಸೇವೆಯನ್ನು ಮಾಡಿ ಗುರು ಕೃಪೆಯನ್ನು ಪಡೆದನು. ಸಿಂದೋಗಿಯ ಮಾರನಿಗೆ ಹುಟ್ಟಿದ ಆ ಕೂಸಿಗೆ ಮರುಳಸಿದ್ದನೆಂದು ಹೆಸರಿಟ್ಟರು. ಮುಂದೆ ಶ್ರೀ ಗುರುಗಳು ಈತನ ಪೂಜೆಗಾಗಿ ಸಿಂದೋಗಿಯ ಮಾದಿಗ ಕೇರಿಯಲ್ಲಿ ಭವ್ಯವಾದ ಮರುಳಸಿದ್ದ ದೇವಾಲಯವನ್ನು ಕಟ್ಟಿಸಿದನು. ಅಲ್ಲಿ ಶಿವಲಿಂಗವನ್ನು ಸ್ಥಾಪಿಸಿ ಅದರ ಪೂಜೆಯ ಭಾರವನ್ನು ಮರುಳುಸಿದ್ದನಿಗೇ ಒಪ್ಪಿಸಿದರು. ಈತನೇ ಮುಂದೆ ಶರಣನಂತೆ ಬಾಳಿದನು.[೨]

## ಸಿದ್ದಲಿಂಗವರೇಣ್ಯರು

ಈ ಪೀಠದ ಪಟ್ಟವಲ್ಲರಿಯ ಪ್ರಕಾರ ೧೦೮ನೇಯ ಪೀಠಾಧ್ಯಕ್ಷರಾದ ಶ್ರೀ ಸಿದ್ದಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಪೀಠದ ಉನ್ನತಿಗಾಗಿ ಬಹಷ್ಟು ಶ್ರಮಿಸಿದವರು. ಇವರು ಚಿತ್ರದುರ್ಗ ಜಿಲ್ಲೆಯ ಜಗಳೂರು ತಾಲ್ಲೂಕಿನ ಬಂಗಾರನಾಯಕನ ಹಳ್ಳಿ ಎಂಬ ಗ್ರಾಮದ ಗುರುಸ್ಥಲ ಮಠದ ಶ್ರೀ ಚನ್ನಬಸವಾರ್ಯ ಮತ್ತು ಗುರುಸಿದ್ದಾಂಬಾ ಎಂಬ ದಂಪತಿಗಳ ಗರ್ಭದಲ್ಲಿ ೧೮೯೦ನೇ ಇಸವಿ ಶಾ.ಶ. ೧೮೧೨ನೇ ವಿಕೃತನಾಮ ಸಂವತ್ಸರ ಮಾಘ ಬಹುಳ ಸಪ್ತಮಿ ಭಾನುವಾರ ಸಂಧ್ಯಾ ಸಮಯದಲ್ಲಿ ಜನಿಸಿದರು. ಇವರಿಗೆ ಸಿದ್ದಲಿಂಗಾರ್ಯ ಎಂಬ ನಾಮಕರಣವಾಯಿತು.

ಉಜ್ಜಿನಿ ಪೀಠದ ೧೦೭ನೇ ಪೀಠಾಧಿಕಾರಿಗಳಾಗಿದ್ದ ಮರುಳಸಿದ್ದ ರಾಜದೇಶಿಕೇಂದ್ರ ಶಿವಾಚಾರ್ಯರು ಈ ಬಾಲಕನ ಭವಿಷ್ಯವನ್ನು ಅರಿತು ಶಾ.ಶ.೧೮೨೮ನೇ [೧೯೦೬ನೇ ಇಸವಿ] ಪರಾಭವನಾಮ ಸಂವತ್ಸರ ವೈಶಾಖ ಪಂಚಮಿ ಭಾನುವಾರ ಉದಯ ಶುಭಮುಹೂರ್ತದಲ್ಲಿ ಪೀಠಾಧಿಕಾರವನ್ನು ಅನುಗ್ರಹಿಸಿ ಶ್ರೀ ಸಿದ್ದಲಿಂಗ ಶಿವಾಚಾರ್ಯ ಮಹಾಸ್ವಾಮಿಗಳೆಂದು ನಾಮಕರಣವನ್ನು ಮಾಡಿದರು.

ಅತಿ ಚಿಕ್ಕ ವಯಸ್ಸಿನಲ್ಲಿ ಹಟಿಹರೆಯದಲ್ಲಿಯೇ ಜಗದ್ಗುರುತ್ವವನ್ನು, ಪಡೆದ ಇವರು ತಮ್ಮ ಆಸ್ಥಾನ ವಿದ್ವಾಂಸರಾದ ಪಂ. ಶ್ರೀ ಉಮಚಗಿ ಶಂಕರ ಶಾಸ್ತ್ರಿಗಳವರಿಂದ ತರ್ಕ ವ್ಯಾಕರಣಾದಿ ಶಾಸ್ತ್ರಗಳ ಜೊತೆಗೆ. ವೀರಶೈವ ಧರ್ಮ ಗ್ರಂಥವಾದ "ಶ್ರೀ ಸಿದ್ಧಾಂತ ಶಿಖಾಮಣಿ"ಯನ್ನು ಚನ್ನಾಗಿ ಅಭ್ಯಸಿಸಿ ಅದರ ಆಚರಣೆಯನ್ನು ನಿತ್ಯಜೀವನದಲ್ಲಿ ಅಳವಡಿಸಿಕೊಂಡರು. ತಪೋ ಬಲವನ್ನು ಬೆಳೆಸಿಕೊಂಡ ಅವರು ಶಿವಯೋಗ ಸಿದ್ಧಿಯ ಬಲದಿಂದ ಸಂಸಾರಿಗಳ ಸಂತಾಪವನ್ನು ಧೂರೀಕರಿಸುತ್ತಿದ್ದರು. ಇವರು ತಮ್ಮ ಪೀಠದಲ್ಲಿ ನಂದೆ, ಬೆದ್ರೆ-ಸುರಬಿ, ಸುಶೀಲೆ ಮತ್ತು ಸುಮನೆ ಎಂಬ ಪಂಚವರ್ಣಗಳ ಗೋವುಗಳನ್ನು ಸಂರಕ್ಷಿಸಿ ಅವುಗಳ ಪಂಚಾಮೃತದಿಂದ ಲಿಂಗಾಭಿಷೇಕವನ್ನು ಮಾಡುವುದರ ಜೊತೆಗೆ ಗೋಮಯದಿಂದ ಪರಿಶುದ್ಧವಾದ ವಿಭೂತಿಯನ್ನು ತಯಾರಿಸಿ ತಾವು ಧರಿಸುವುದರ ಜೊತೆಗೆ ಅನ್ಯರಿಗೂ ಸಹ ಗೋಮಯದಿಂದಲೇ ಸಿದ್ಧವಾದ ಶುದ್ದ ಭಸ್ಮ ಧರಿಸುವಂತೆ ಉಪದೇಶಿಸುತ್ತಿದ್ದರು. ಬಳ್ಳಾರಿ ಪ್ರಾಂತ್ಯದಲ್ಲಿ ಒಮ್ಮೆ ಭೀಕರ ಬರಗಾಲ ಒಂದೊಗಿದಾಗ ವಿಶೇಷ ಪೂಜಾನುಷ್ಠಾನ ಅನ್ನ ಸಂತರ್ಪಣೆ ಮುಂತಾದವುವನ್ನು

ಮಾಡಿಸಿ, ೪.೮.೧೯೨೧ ರಿಂದ ಮೂರು ದಿವಸ ಸತತ ಸುವೃಷ್ಟಿಯನ್ನು ಬರಿಸಿದರು. ಧರ್ಮ ಜಾಗೃತಿಗಾಗಿ ದೇಶದ ನಾನಾ ಭಾಗಗಳಲ್ಲಿ ಇವರು ಸಂಚರಿಸಿ. ಜನರಲ್ಲಿ ಧರ್ಮ ಜಾಗೃತಿಯನ್ನುಂಟು ಮಾಡಿದರು. ೧೯೧೮ರಲ್ಲಿ ಕಾಶಿಯಲ್ಲಿ ನಡೆದ ಪಂಚಚಾರ್ಯ ಸಮ್ಮೇಳನದಲ್ಲಿ ಪಾಲ್ಗೊಂಡು. ಧರ್ಮ ಪ್ರಚಾರದ ದೃಷ್ಟಿಯಿಂದ ಹದಿಮೂರು ಠರಾವುಗಳನ್ನು ಮಂಡಿಸಿದರು. ಅವುಗಳಲ್ಲಿ ಪಂಚಚಾರ್ಯ ಸಮ್ಮೇಳನದ ಸ್ಮಾರಕವಾಗಿ ಕಾಶಿಯ ಶ್ರೀ ವಿಶ್ವರಾಧ್ಯ ಗುರುಕುಲದ ಸ್ಥಾಪನೆಯು ಮಹತ್ವವಾದದ್ದು. ಕಾಶಿಗೆ ಅಧ್ಯಯನಕ್ಕೆ ಬಂದ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಹಾಗೂ ಇನ್ನಿತರ ಭಾಗಗಳಲ್ಲಿ ಮಠಾಧಿಪತಿಗಳಾಗಿರುವ ಪ್ರತಿಯೊಬ್ಬ ಸ್ವಾಮಿಗಳೂ ಆಶ್ರಯ ಪಡೆದ ವಿದ್ಯಾರ್ಥಿಗಳೇ ಆಗಿರುತ್ತಾರೆ.

೨೫.೧೨.೧೯೨೮ರಂದು ಉಜ್ಜಯಿನಿ ಪೀಠದಲ್ಲಿಯೇ ನಾಗನೂರು ಬ್ರಹನ್ಮಠಾಧ್ಯಕ್ಷ ಶ್ರೀ ವೇ.ಪಂ. ಕಾಶಿನಾಥ ಶಾಸ್ತ್ರಿಗಳ ಕಾರ್ಯದರ್ಶಿತ್ವದಲ್ಲಿ ೫ನೆಯ ಪಟ್ಟಚರಾಧಿಕಾರಿಗಳ ಸಮ್ಮೇಳನವನ್ನು ನಡೆಸಿ ಪಟ್ಟಚರಾಧಿಕಾರ ವರ್ಗಕ್ಕೆ ಸನ್ಮಾರ್ಗೋಪದೇಶ ಮಾಡಿದರು. ಕೇದಾರದ ಶ್ರೀ ಜಗದ್ಗುರು ವಿಶ್ವಲಿಂಗ ಶಿವಾಚಾರ್ಯ ಸ್ವಾಮಿಗಳು ಕರ್ನಾಟಕಕ್ಕೆ ಆಗಮಿಸಿದಾಗ ಅನಾರೋಗ್ಯದಿಂದ ೧೫.೭.೧೯೩೦ ರಂದು ಉಜ್ಜಿನಿ ಪೀಠದಲ್ಲಿಯೇ ಲಿಂಗೈಕ್ಯರಾದ ಕಾರಣ, ಆ ಪೀಠದ ಉತ್ತರಾಧಿಕಾರ ಭಾರವು ತಮ್ಮ ಮೇಲೆ ಉಳಿದದ್ದನ್ನು ತಿಳಿದ ಸಿದ್ಧಲಿಂಗಸ್ವಾಮಿಗಳು ಪ್ರಯತ್ನ ಮಾಡಿ ಮೊದಲೇ ವಟುವೆಂದು ನಿರ್ಣಯಗೊಂಡು, ನೀಲಕಂಠ ಲಿಂಗರಿಗೆ ಕಾಶೀ ಶಿವಲಿಂಗಸ್ವಾಮಿಗಳ ಹಸ್ತದಿಂದ ಕೇದಾರ ಜಗದ್ಗುರು ಪಟ್ಟಾಧಿಕಾರವನ್ನು ೧.೧೦.೧೯೩೧ ರಂದು ನೇರವೇರಿಸಿ ಆ ಪೀಠವನ್ನು ಉದ್ಧರಿಸಿದರು.

### ಪೀಠದ ಜೀರ್ಣೋದ್ಧಾರ

ವೀರಶೈವ ಧರ್ಮಾಚಾರ್ಯರ ಕೀರ್ತಿಯನ್ನು ಭರತ ಖಂಡದಲ್ಲಿ ಪ್ರಸಾರ ಮಾಡಿ ಪ್ರಸಿದ್ಧರಾದ ಸಿದ್ದಲಿಂಗಸ್ವಾಮಿಗಳು, ಉಜ್ಜಿನಿ ಪೀಠದ ಜೀರ್ಣೋದ್ಧಾರ ಕಾರ್ಯದಲ್ಲಿ ತತ್ಪರವಾಗಿ ೧೦೧ ಗೋರಕ್ಷಣೆಯಾಗುವ ಮಹಾ ಗೋಶಾಲೆಯನ್ನು, ಪಂಚಚಾರ್ಯರ ಸಭಾ ಮಂಟಪವನ್ನೂ ದಾಸೋಹಕ್ಕಾಗಿ, ಮಹಾ ಪಾಕಶಾಲೆ ಮತ್ತು ಶಿವಾರ್ಚನೆಗಾಗಿ ಶಿವಪೂಜಾ ಮಂದಿರವನ್ನು ನಿರ್ಮಿಸಿದರು.

### ವಿದ್ಯಾದಾನ

ವಿದ್ಯಾ ಪ್ರೇಮಿಗಳೂ ವಿದ್ವಾಂಸರೂ ಆದ ಗುರುಗಳು ತಮ್ಮ ಪೀಠದಲ್ಲಿ ಶ್ರೀ ದಾರುಕಾಚಾರ್ಯ ಸಂಸ್ಕೃತ ಪಾಠಶಾಲೆಯನ್ನು ಸಂಸ್ಥಾಪಿಸಿ, ಅವರ ಪ್ರಾಧ್ಯಾಪಕರೂ ಸದ್ಧರ್ಮ ಪೀಠದ ಆಸ್ಥಾನ ಪಂಡಿತ ಉಮಚಗಿ ಶಂಕರಶಾಸ್ತ್ರಿಗಳವರಿಂದ. ಈಶ-ಕೇಶ-ಕಠ-ಮುಂಡಕ ಸಿದ್ಧಾಂತ ಶಿಖೋಪನಿಷತ್ ಮತ್ತು ಬ್ರಹ್ಮ ಸೂತ್ರಗಳ ಮೇಲೆ ವೀರಶೈವ ಸಿದ್ಧಾಂತ ಪರವಾದ ಶಾಂಕರೀ ವೃತ್ತಿಯನ್ನು, ಸಿದ್ಧಾಂತ ಸುಧಾಕರವೇ ಮೊದಲಾದ ಗ್ರಂಥವನ್ನು ಬರೆಯಿಸಿ ಪ್ರಕಾಶಪಡಿಸಿದರು. ಈ ಎಲ್ಲಾ ಗ್ರಂಥಗಳೂ ಕಾಶಿಯ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ೧೯೬೬ರಿಂದ ಪ್ರಾರಂಭವಾದ "ಶಕ್ತಿ ವಿಶಿಷ್ಟಾದ್ವೈತ ವೇದಾಂತಶಾಸ್ತ್ರ ಮತ್ತು "ಆಚಾರ್ಯ ಪರೀಕ್ಷೆಗೆ ಪಠ್ಯ ಗ್ರಂಥಗಳಾಗಿ ನಿಯೋಗಿಸಲಾಯಿತು. ಗುರುಗಳು ಇಂತಹ ಗ್ರಂಥ

ಪ್ರಕಾಶನಕ್ಕೋಸ್ಕರವಾಗಿ "ಜ್ಞಾನಗುರು ವಿದ್ಯಾಪೀಠ" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಈ ಪೀಠವು ಇಂದಿನವರೆಗೂ ತನ್ನ ಕಾರ್ಯವನ್ನು ಅವ್ಯಾಹತವಾಗಿ ನಡೆಸುತ್ತಿದೆ. ಸಿದ್ಧಲಿಂಗಸ್ವಾಮಿಗಳು ಬಳ್ಳಾರಿ ವಿಭಾಗದ ಸಮಸ್ತ ವೀರಶೈವರ ವಿದ್ಯಾಭಿವೃದ್ಧಿಗೋಸ್ಕರ ೧೬.೧೦.೧೯೧೬ ರಂದು "ಮದ್ರಾಸ್ ವೀರಶೈವ ವಿದ್ಯಾವರ್ಧಕ ಸಂಘ" ಎಂಬ ಹೆಸರಿನ ಸಂಸ್ಥೆಯನ್ನು ಸ್ಥಾಪಿಸಿ, ಅದಕ್ಕೆ ಪೂಜ್ಯರು ರೂ. ೫೦೦೦, ಮೂಲ ನಿಧಿಯನ್ನು ಆಶೀರ್ವದಿಸಿದರು. ನಂತರ ಈ ಸಂಸ್ಥೆಯು "ವೀರಶೈವ ವಿದ್ಯಾವರ್ಧಕ ಸಂಘ ಬಳ್ಳಾರಿ" ಎಂಬ ಹೆಸರಿನಿಂದ ಪರಿವರ್ತನೆಗೊಂಡು ೧೯೧೮ರಲ್ಲಿ ರಿಜಿಸ್ಟರ್ಡ್ ಸಂಸ್ಥೆಯಾಗಿ ಇಂದು ವಿಶಾಲವಾದ ಸಂಸ್ಥೆಯಾಗಿ ಬೆಳೆದಿದೆ.

### ಶ್ರೀ ಸಿದ್ದೇಶ್ವರ ಸ್ವಾಮಿಗಳು

ಸಿದ್ಧಲಿಂಗ ಶಿವಾಚಾರ್ಯರು ಲಿಂಗೈಕ್ಯರಾದ ನಂತರ ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕು ಆನೇಸಿದ್ದಾಪುರ. ಬೃಹನ್ಮಠದ ಶ್ರೀ ಸುಬ್ರ. ತ್ರಿಲೋಚನ ಶಿವಾಚಾರ್ಯರು ಉತ್ತರಾಧಿಕಾರಿಗಳೆಂದು ನೇಮಿತರಾದರು. ಯುವನಾಮ ಸಂವತ್ಸರ ಮಾಘ ಶು|| ದಶಮಿ ದಿನಾಂಕ ೨.೨.೧೯೩೬ನೇ ಭಾನುವಾರ ದಿವಸ ಶ್ರೀ ಮದ್ರಂಬಾಪುರಿ ವೀರ ಸಿಂಹಾಸನಾಧೀಶ್ವರ ಶ್ರೀ ೧೦೦೮ ಶಿವಾನಂದ ರಾಜೇಂದ್ರ ಸ್ವಾಮಿಗಳು ಮತ್ತು ಹಿಮವತ್ಕೇದಾರ ನೀಲಕಂಠ ಸ್ವಾಮಿಗಳವರ ದಿವ್ಯ ಸನ್ನಿದಾನದಲ್ಲಿ ಅಧಿಕಾರ ಗ್ರಹಣ ಮಾಡಿದರು. ಆಗ ಇವರಿಗೆ ಸಿದ್ಧೇಶ್ವರ ಶಿವಾಚಾರ್ಯ ಸ್ವಾಮಿಗಳೆಂದು ನಾಮಕರಣವಾಯಿತು. ಇವರು ಅಧಿಕಾರಕ್ಕೆ ಬಂದ ನಂತರ ಪೂರ್ವದ ಗುರುಗಳ ಸಂಕಲ್ಪದ ಕೆಲ ಅಪೂರ್ವವಾದ ಗೋಶಾಲೆ ಮುಂತಾದ ಕಟ್ಟಡಗಳ ಕೆಲಸವನ್ನು ಪೂರ್ಣ ಮಾಡುವುದರ ಜೊತೆಗೆ "ಶಿಕ್ಷಣದ ಬಗ್ಗೆಯೂ ಉನ್ನತ ನೀತಿಗಳನ್ನು ಜಾರಿಗೊಳಿಸಿದರು. ಶಿಕ್ಷಣ ಸಂಸ್ಥೆಗೆ ಭೂಮಿ, ಧನವನ್ನು ಸಂಗ್ರಹಿಸಿ ಇದರ ಜೊತೆಗೆ ಚಿತ್ರದುರ್ಗ, ಗದಗ, ತುರವನೂರು, ಉಜ್ಜಿನಿಗಳಲ್ಲಿ ಪ್ರಸಾದ ನಿಲಯಗಳನ್ನು ೫ ಸಂಸ್ಕೃತ ಪಾಠಶಾಲೆಗಳನ್ನು ಉಜ್ಜಿನಿ, ಯಲಿವಾಳ, ಹರಪನಹಳ್ಳಿ, ಯಶವಂತನಗರ, ಹೊಳಗುಂದಿ ಮುಂತಾದ ಗ್ರಾಮಗಳಲ್ಲಿ ಪ್ರೌಢಶಾಲೆ ಕಾಲೇಜುಗಳನ್ನೂ ಸ್ಥಾಪಿಸಿದ್ದಾರೆ. ಧರ್ಮ ಪ್ರಚಾರಕ್ಕಾಗಿ "ಸದ್ಧರ್ಮ ಪ್ರಭಾ" ಎಂಬ ತ್ರೈಮಾಸಿಕ ಪತ್ರಿಕೆಯನ್ನು ಇಂದು ಪ್ರಕಟಿಸುತ್ತಿದ್ದಾರೆ.

### ಹಳ್ಳಿಯ ಹೊಳಪು

ಉಜ್ಜಿನಿ ಸದ್ಧರ್ಮ ಪೀಠದ ೧೧೦ನೇ ಪೀಠಾಚಾರ್ಯರಾಗಿದ್ದ ಮರುಳಾಧ್ಯ ಸ್ವಾಮಿಗಳ ಜನನ ಚಿತ್ರದುರ್ಗ ಜಿಲ್ಲೆಯ ಕಂದಗಲ್ಲು. ಹಳ್ಳಿಯಲ್ಲಿ ಜನಿಸಿದ ಅವರು ಆಚಾರ ಸಂಪನ್ನರಾದ ಚನ್ನಬಸಯ್ಯನವರ ಸಹ ಧರ್ಮಿಣಿ ಕೊಟ್ರಮ್ಮನವರ ಪುತ್ರನಾಗಿ ೧೯೩೬ರಲ್ಲಿ ಜನಿಸಿದ ಶಿವಪ್ರಕಾಶ ತಮ್ಮ ಮೂಲ ಮಠವಾದ ಉಜ್ಜಿನಿ ಪೀಠದ ಶಾಖಾ ಮಠವು ಆದ ಚಿತ್ರದುರ್ಗದ ಉಜ್ಜಿನಿ ಮಠದಲ್ಲಿ ಇದ್ದು ಪ್ರಾಥಮಿಕ ಶಿಕ್ಷಣವನ್ನು ಪಡೆದವರು. ಅದು ಪುತ್ರವರ್ಗ ಮಠವಾದುದರಿಂದ ಅನಿವಾರ್ಯವಾಗಿ ಹದಿವಯದಲ್ಲೇ ಪಟ್ಟಾಧ್ಯಕ್ಷರಾಗ ಬೇಕಾಯಿತು. ಅವರಿಗೆ ಷ|ಬ್ರ| ಶಿವಪ್ರಕಾಶ ಶಿವಾಚಾರ್ಯ ಸ್ವಾಮಿಗಳೆಂಬ ಅಭಿದಾನವು ಪ್ರಾಪ್ತವಾಯಿತು. ವಿದ್ಯೆಯ ಹಸಿವು ಇದ್ದುದರಿಂದ ಬೆಂಗಳೂರಿನ

ಜಯಚಾಮರಾಜೇಂದ್ರ ಸಂಸ್ಕೃತ ಮಹಾವಿದ್ಯಾಲಯದಲ್ಲಿ ಸತತವಾಗಿ ೧೨ ವರ್ಷಗಳವರೆಗೆ ಅಧ್ಯಯನ ಮಾಡಿ ೧೯೫೪ರಲ್ಲಿ "ಶಕ್ತಿ ವಿಶಿಷ್ಟಾದ್ವೈತ ವೇದಾಂತ ವಿದ್ವತ್ ಪದವಿ ಭೂಷಿತರಾದರು. ವ್ಯಕ್ತಿತ್ವನ್ನು ಗುರುತಿಸಿ ಗುರುತರ ಹೊಣೆ ಹೊರಿಸುವ ಕಲಾನಿಪುಣರಾದ ಶ್ರೀಮದ್ ಉಜ್ಜಿನಿ ಸಿದ್ದೇಶ್ವರ ಸ್ವಾಮಿಗಳವರ ದೃಷ್ಟಿಗೆ ಶ್ರೀಗಳು ಪಾತ್ರದಾರು. ೧೨ ವರ್ಷಗಳಿಂದ ಬೆಂಗಳೂರಿನ ಮಹಂತರ ಮಠದಲ್ಲಿ ಇರುವಾಗಲೇ ಧರ್ಮ ಸಿಂಹರೆನಿಸಿದ್ದ. ರಂಭಾಪುರೀ ಜಗದ್ಗುರು ವೀರ ಗಂಗಾಧರ ಸ್ವಾಮಿಗಳವರ ಅನುಗ್ರಹಕ್ಕೂ ಪಾತ್ರರಾಗಿದ್ದರು.

### ಗುರು ಕಾರುಣ್ಯ

ವಿದ್ಯಾಭ್ಯಾಸ ಮುಗಿಸಿಕೊಂಡು ಚಿತ್ರದುರ್ಗಕ್ಕೆ ಬಂದ ನಂತರ ಉಜ್ಜಿನಿ ಜಗದ್ಗುರುಗಳವರು. ಇವರ ಕರ್ತೃತ್ವ ಶಕ್ತಿಯನ್ನು ಮೆಚ್ಚಿ ಧರ್ಮ ಹಾಗೂ ಸಮಾಜ ಸೇವೆಗೆ ತೊಡಗುವಂತೆ ಆದೇಶಿಸಿದರು. ಜ್ಞಾನಗುರು ವಿದ್ಯಾಪೀಠವು ಆಗಲೇ ನೊಂದಾಯಿಸಲ್ಪಟ್ಟಿತ್ತು. ಅದರ ಅಧ್ಯಕ್ಷತೆಯನ್ನು ಉಜ್ಜಿನಿ ಗುರುಗಳು ಇವರಿಗೆ ನೀಡಿದರು. ಹೀಗಾಗಿ ವಿದ್ಯಾಕ್ಷೇತ್ರದ ವಿಸ್ತರಣೆಗೆ ವಿಶೇಷ ಗಮನಕೊಡಲು ಸಾಧ್ಯವಾಯಿತು. ಚಿತ್ರದುರ್ಗದಲ್ಲಿ ಶ್ರೀ ಸಿದ್ದೇಶ್ವರ ಪ್ರಸಾದ ನಿಲಯ, ಸಂಸ್ಕೃತ ಪಾಠಶಾಲೆ, ಅಂಬಳಿ, ಹೊಸಳ್ಳಿ, ಜಗಳೂರು, ಲಕ್ಷ್ಮೇಶ್ವರ, ಗದಗ, ಮರಿವಾಳ ಮುಂತಾದ ಹಳ್ಳಿ ಪಟ್ಟಣಗಳಲ್ಲಿ ಪ್ರೌಢ ಶಾಲೆಗಳನ್ನು ಪ್ರಸಾದ ನಿಲಯಗಳನ್ನು ಪ್ರಾರಂಭಿಸಿದರು.

### ಸದ್ಧರ್ಮ ಪೀಠೇಶ

ಮರುಳಾರಾಧ್ಯರ ವಿದ್ವತ್‌ಶಕ್ತಿ ಸೌಜನ್ಯಗಳನ್ನು ಮೆಚ್ಚಿದ ಉಜ್ಜಿನಿ ಹಿರಿಯ ಗುರುಗಳು ಇವರಿಗೆ ೨೮.೮.೧೯೬೫ನೇ ಇಸವಿಯಲ್ಲಿ, ಚರಪಟ್ಟಾಧಿಕಾರವನ್ನು ಸದ್ಧರ್ಮ ಪೀಠದ ಪದ್ಧತಿಯಂತೆ ಅನುಗ್ರಹಿಸಿದರು. ಪಂಚಮುದ್ರಾ ಪೂರ್ವಕ ಕಿರೀಟಧಾರಣ ಮಾಡಿ ಶ್ರೀ ೧೦೦೮ ಜಗದ್ಗುರು ಮರುಳಾರಾಧ್ಯ ಶಿವಚಾರ್ಯ ಮಹಾಸ್ವಾಮಿಗಳು ಎಂದು ನಾಮಕರಣ ಮಾಡಿ ಆರ್ಶೀವದಿಸಿದರು. ಗುರುತರ ಹೊಣೆ ಹೊತ್ತುಕೊಂಡು ಸನ್ನದಿಯವರು ಎಲ್ಲಾ ಪಂಚಪೀಠಾಚಾರ್ಯರ ಜೊತೆ ಜೊತೆಯಲ್ಲಿ ಸುಮಾರು ೧೦ ವರ್ಷಗಳ ಕಾಲ ದೇಶಾದ್ಯಂತ ಸಂಚರಿಸಿ ಸದ್ಧರ್ಮ ಪ್ರಭೆಯನ್ನು ಉದ್ದೀಪನಗೊಳಿಸಿದರು. ದಿನಾಂಕ ೩.೪.೧೯೭೫ ರಂದು ಇವರು ಮರಣ ಹೊಂದಿದರು.

ನಂತರ ವಯೋವೃದ್ಧರೂ ಆದ ಸಿದ್ದೇಶ್ವರ ಸ್ವಾಮಿಗಳು ಸದ್ಧರ್ಮ ಪೀಠದ ಸಂರಕ್ಷಣೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಮುನ್ನಡೆದರು. ಆದರೆ ಶತಮಾನದಂಚಿನಲ್ಲಿದ್ದ ಸ್ವಾಮಿಗಳು ಸ್ವಇಚ್ಛೆಯಿಂದ ನೂತನ ಪೀಠಾಚಾರ್ಯರನ್ನು ತಮ್ಮ ಜೀವಿತ ಕಾಲದಲ್ಲೇ ನಿಯುಕ್ತಿಗೊಳಿಸಲು ನಿರ್ಧರಿಸಿದರು. ಅವರ ದಿವ್ಯ ದೃಷ್ಟಿಗೆ ಸಿರಿಗೆರಿಯ ಹಿರಿಯ ಮಠದ "ಶ್ರೀ ಷ.ಬ್ರ. ಮರುಳಸಿದ್ದ ಶಿವಚಾರ್ಯರು ಸೂಕ್ತ ವ್ಯಕ್ತಿ" ಎಂದು ಗೋಚರವಾಯಿತು. ಆಗಲೇ ಆದೇಶ ಪತ್ರ ಕಳಿಸಿ ಪೀಠಕ್ಕೆ ಬರಮಾಡಿಕೊಂಡರು. ಪೀಠಾಭಿಮಾನಿಗಳಿಂದ ತುಂಬಿದ ಸಭೆಯಲ್ಲಿ ಸಿರಗೇರಿಯ ಮರುಳಸಿದ್ಧ ಶಿವಾಚಾರ್ಯರೇ ತಮ್ಮ

ಉತ್ತಾರಾಧಿಕಾರಿ ಎಂದು ಹೇಳಿದರು. ನಂತರ ಮುಂದೆ ಪೀಠ ಪರಂಪರೆಯಂತೆ. ಸಮಾನ ಪೀಠಾಚಾರ್ಯರಾದ ಶ್ರೀ ಮದ್ರಂಭಾಪುರಿ, ಶ್ರೀಮತ್‌ಕಾಶಿ, ಶ್ರೀಮತ್ ಹಿಮವತ್ಕೇದಾರ, ಶ್ರೀಮತ್ ಶ್ರೀಶೈಲ, ಜಗದ್ಗುರುಗಳವರ ದಿವ್ಯ ಸನ್ನಿದಾನದಲ್ಲಿ ಬಹು ವಿಜೃಂಭಣೆಯಿಂದ ಸದ್ಧರ್ಮ ಪೀಠಾರೋಹಣ ಕಾರ್ಯ ನೆರವೇರಿಸಿದರು.

## ಮರುಳುಸಿದ್ದ ರಾಜ ದೇಶಿಕೇಂದ್ರ ಸ್ವಾಮಿಗಳು

ಉಜ್ಜಿನಿ ಸದ್ಧರ್ಮ ಸಿಂಹಾಸನದ ೧೧೧ನೇಯ ಸ್ವಾಮಿಗಳಾಗಿ ೧೯೯೫ನೇಯ ನವಂಬರ್ ೫ ರಂದು ಅಧಿಕಾರ ಸ್ವೀಕರಿಸಿದರು. ಇವರು ಶ್ರೀ ೧೦೦೮ ಜಗದ್ಗುರು ಮರುಳಸಿದ್ದ ರಾಜ ದೇಶಿಕೇಂದ್ರ ಶಿವಾಚಾರ್ಯ ಸ್ವಾಮಿಗಳು ಎಂಬ ನಾಮಾಂಕಿತ ರೂಢರಾದರು. ಸಮಾನ ಪೀಠಾಚಾರ್ಯರ ಮಧ್ಯೆ ಅತ್ಯಂತ ಕಿರಿಯ ವಯಸ್ಸಿನವರಾದರೂ ಹಿರಿಯ ಸ್ಥಾನವನ್ನಲಂಕರಿಸಿದರು. ನಂತರ ಸ್ವಾಮಿಗಳೂ ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ, ಗಡಿಗಳನ್ನು ಮೀರಿ ದೇಶ ವ್ಯಾಪ್ತಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಹೆಮ್ಮೆ ಇವರದಾಗಿದೆ. ನಿತ್ಯಾನ್ನ ದಾಸೋಹವು ಸನ್ನಿಧಿಯವರ ಚೊಚ್ಚಲ ಕೊಡಿಗೆಯಾಗಿದೆ. ಇವರು ಶ್ರೇಷ್ಠ ವಿದ್ವಾಂಸರೂ ಆಗಿರುವುದರಿಂದ ವಿದ್ಯಾ ಕ್ಷೇತ್ರಗಳತ್ತ ಹೆಚ್ಚು ಗಮನ ಹರಿಸುತ್ತಿದ್ದಾರೆ. ಜ್ಞಾನಗುರು ವಿದ್ಯಾಪೀಠದ ಅಡಿಯಲ್ಲಿಯೇ ಅನೇಕ ವಿದ್ಯಾ ಸಂಸ್ಥೆಗೆ ಇದ್ದ ಕಟ್ಟಡ, ಪೀಠೋಪಕರಣ, ಪಾಠೋಪಕರಣ, ಆಟೋಪಕರಣಗಳ ಕೊರತೆಯನ್ನು ನೀಗಿಸಿದ್ದಾರೆ. ಈ ರೀತಿಯಾಗಿ ಉಜ್ಜಿನಿ ಪೀಠದ ಪರಂಪರೆಯನ್ನು ತಿಳಿಯಬಹುದಾಗಿದೆ.

## "ಉಜ್ಜಿನಿಪೀಠದ ಜಗದ್ಗುರು ಪರಂಪರೆ"

ದ್ವ್ಯಕ್ಷರ ಶಿವಾಚಾರ್ಯ ಭಗವತ್ಪಾದರು [ಕೃತಯುಗದ ಆರಂಭ]

ದ್ವವಕ್ತ್ರ ಶಿವಾಚಾರ್ಯ ಭಗವತ್ಪಾದರು [ಪ್ರೇತಾಯುಗದ ಆರಂಭ]

ದಾರಾಕಾಚಾರ್ಯ ಭಗವತ್ಪಾದರು [ದ್ವಾಪರಯುಗದ ಆರಂಭ]

೧. ಮರುಳಾರಾಧ್ಯ ಶಿವಾಚಾರ್ಯ ಭಗವತ್ಪಾದರು [ಕಲಿಯುಗದ ಆರಂಭ]

೨. ಮಲ್ಲಿಕಾರ್ಜುನ ಶಿವಾಚಾರ್ಯ

೩. ಸಿದ್ದೇಶ್ವರ ಶಿವಾಚಾರ್ಯ

೪. ಗುರುನಾಥ ಶಿವಾಚಾರ್ಯ

೫. ಶಿವಯೋಗಿಂದ್ರ ಶಿವಾಚಾರ್ಯ

೬. ತ್ರ್ಯಂಬಿಕ ಶಿವಾಚಾರ್ಯ

೭. ಶಿವಾನಂದ ಶಿವಾಚಾರ್ಯ

೮. ಮರುಳಸಿದ್ಧ ಶಿವಾಚಾರ್ಯ

೯. ಅಮಿತಾನಂದ ಶಿವಾಚಾರ್ಯ

೧೦. ನೀಲಗ್ರೀವ ಶಿವಾಚಾರ್ಯ

೧೧. ನಂದೀಶ್ವರ ಶಿವಾಚಾರ್ಯ

೧೨. ಗುರುರಾಜ ಶಿವಾಚಾರ್ಯ

೧೩. ಮಹಾದೇವ ಶಿವಾಚಾರ್ಯ

೧೪. ಮಯಾಂತ ಶಿವಾಚಾರ್ಯ

೧೫. ಗುರುಶಾಂತ ಶಿವಾಚಾರ್ಯ

೧೬. ವೃಷಭಧ್ವಜ ಶಿವಾಚಾರ್ಯ

೧೭. ವೀರ ವೃಷಭೇಂದ್ರ ಶಿವಾಚಾರ್ಯ

೧೮. ದ್ವಿತೀಯ ಮಲ್ಲಿಕಾರ್ಜುನ ಶಿವಾಚಾರ್ಯ

೧೯. ಶಿವಲಿಂಗ ಶಿವಾಚಾರ್ಯರು

೨೦. ದ್ವಿತೀಯ ಸಿದ್ದೇಶ್ವರ ಶಿವಾಚಾರ್ಯ

೨೧. ಲಿಂಗಾನಂದ ಶಿವಾಚಾರ್ಯ

೨೨. ಸೋಮೇಶ್ವರ ಶಿವಾಚಾರ್ಯ

೨೩. ಮುಕ್ತಿನಾಥ ಶಿವಾಚಾರ್ಯ

೨೪. ಶ್ರೀ ವಾಮದೇವ ಶಿವಾಚಾರ್ಯ

೨೫. ಜಗದೀಶ್ವರ ಶಿವಾಚಾರ್ಯ

೨೬. ಮಲ್ಲಿಕಾರ್ಜುನ ಶಿವಾಚಾರ್ಯ

೨೭. ವಿಶ್ವೇಶ್ವರ ಶಿವಾಚಾರ್ಯ

೨೮. ಮಾಹೇಶ್ವರ ಶಿವಾಚಾರ್ಯ

೨೯. ಅಘೋರ ಶಿವಾಚಾರ್ಯ

೩೦. ಚನ್ನವೀರ ಶಿವಾಚಾರ್ಯ

೩೧. ಜಟಾಸಿದ್ದ ಶಿವಾಚಾರ್ಯ.

೩೨. ಗಂಗಾಧರ ಶಿವಾಚಾರ್ಯ.

೩೩. ರುದ್ರೇಶ್ವರ ಶಿವಾಚಾರ್ಯ.

೩೪. ರುದ್ರೇಶ್ವರ ಶಿವಾಚಾರ್ಯ.

೩೫. ಶಾಂತಲಿಂಗ ಶಿವಾಚಾರ್ಯ.

೩೬. ವೈ|| ನಂದೀಶ್ವರ ಶಿವಾಚಾರ್ಯ.

೩೭. ಗಂಗಾಧರ ಶಿವಾಚಾರ್ಯ.

೩೮. ಮಹಾಲಿಂಗ ಶಿವಾಚಾರ್ಯ.

೩೯. ಪಂಚಾನನ ಶಿವಾಚಾರ್ಯ.

೪೦. ಬಿಲ್ವದಳಭೂಷಣ ಶಿವಾಚಾರ್ಯ.

೪೧. ಮಾರಮರ್ದನ ಶಿವಾಚಾರ್ಯ.

೪೨. ನಾಗಭೂಷಣ ಶಿವಾಚಾರ್ಯ.

೪೩. ಶ್ಯಾಮಕಂದರ ಶಿವಾಚಾರ್ಯ.

೪೪. ಚಂದ್ರಶೇಖರ ಶಿವಾಚಾರ್ಯ.

೪೫. ಗುರುಸಿದ್ಧ ಶಿವಾಚಾರ್ಯ.

೪೬. ಭವಹರ ಶಿವಾಚಾರ್ಯ.

೪೭. ಚಂಡೀಶ್ವರ ಶಿವಾಚಾರ್ಯ.

೪೮. ಅಮೃತೇಶ್ವರ ಶಿವಾಚಾರ್ಯ.

೪೯. ಸುಜ್ಞಾನಶೇಖರ ಶಿವಾಚಾರ್ಯ.

೫೦. ಸಿದ್ಧಲಿಂಗ ಶಿವಾಚಾರ್ಯ.

೫೧. ಶೇಷಭೂಷಣ ಶಿವಾಚಾರ್ಯ.

೫೨. ಶಂಕರಾನಂದ ಶಿವಾಚಾರ್ಯ.

೫೩. ಮಹಾಮಲ್ಲಿಕಾರ್ಜುನ ಶಿವಾಚಾರ್ಯ.

೫೪. ಶಂಭುಲಿಂಗ ಶಿವಾಚಾರ್ಯ.

೫೫. ಶಿವಯೋಗ ಪ್ರಭಾಕರ ಶಿವಾಚಾರ್ಯ.

೫೬. ಜನ್ಮಹೋದದಿ ಶಿವಾಚಾರ್ಯ

೫೭. ಶಿವಜ್ಞಾನ ಸಂಜೀವನ ಶಿವಾಚಾರ್ಯ.

೫೮. ಗಣೇಂದ್ರ ಮಂದಾರ ಶಿವಾಚಾರ್ಯ.

೫೯. ಸಿದ್ಧೇಶ್ವರ ಶಿವಾಚಾರ್ಯ.

೬೦. ಪರ ಸಿದ್ಧೇಶ್ವರ ಶಿವಾಚಾರ್ಯ.

೬೧. ಮಹಾಂತದೇವ ಶಿವಾಚಾರ್ಯ.

೬೨. ಮಲ್ಲಿಕಾರ್ಜುನ ಶಿವಾಚಾರ್ಯ.

೬೩. ವೃಷ್ಟಿ ಶಂಕರ ಶಿವಾಚಾರ್ಯ.

೬೪. ಶಂಭುಲಿಂಗ ಶಿವಾಚಾರ್ಯ.

೬೫. ಮದನಾರಿ ಶಿವಾಚಾರ್ಯ.

೬೬. ಮಾಯಾಕೋಲಾಹಲ ಶಿವಾಚಾರ್ಯ.

೬೭. ಶಿವಲೀಲಾ ಚನ್ನವೀರ ಶಿವಾಚಾರ್ಯ.

೬೮. ಪಂಚಾಕ್ಷರ ಶಿವಾಚಾರ್ಯ.

೬೯. ಮಲ್ಲಿಕಾರ್ಜುನ ಶಿವಾಚಾರ್ಯ.

೨೦. ಮಕ್ತಿನಾಥ ಶಿವಾಚಾರ್ಯ.

೨೧. ಮಹಾದೇವ ಶಿವಾಚಾರ್ಯ.

೨೨. ಭರ್ಗೋದೇವ ಶಿವಾಚಾರ್ಯ.

೨೩. ಬಾಲಸಿದ್ಧೇಶ್ವರ ಶಿವಾಚಾರ್ಯ.

೨೪. ಚೆನ್ನ ವೃಷಭ ಶಿವಾಚಾರ್ಯ.

೨೫. ವೃದ್ಧ ವೃಷಭೇಂದ್ರ ಶಿವಾಚಾರ್ಯ.

೨೬. ಚೆನ್ನಮಲ್ಲಿಕಾರ್ಜುನ ಶಿವಾಚಾರ್ಯ.

೨೭. ಮುಕ್ತಿ ಮಲ್ಲಿಕಾರ್ಜುನ ಶಿವಾಚಾರ್ಯ.

೨೮. ಸಿದ್ಧಮಲ್ಲಿಕಾರ್ಜುನ ಶಿವಾಚಾರ್ಯ.

೨೯. ಏಕೋದೇವ ಶಿವಾಚಾರ್ಯ.

೩೦. ಆಚಾರ್ಯಭಾಸ್ಕರ ಶಿವಾಚಾರ್ಯ.

೩೧. ಮೋಕ್ಷೇಶ್ವರ ಶಿವಾಚಾರ್ಯ.

೩೨. ಸಿದ್ದ ವೀರೇಶ ಶಿವಾಚಾರ್ಯ.

೩೩. ಭದ್ರೇಶ್ವರ ಶಿವಾಚಾರ್ಯ.

೩೪. ಅಮಿತಾನಂದ ಶಿವಾಚಾರ್ಯ.

೩೫. ಷಡಕ್ಷರ ಶಿವಾಚಾರ್ಯ.

೩೬. ಭಕ್ತಿವರ್ಧನ ಶಿವಾಚಾರ್ಯ.

೩೭. ಪಾಶಹರ ಶಿವಾಚಾರ್ಯ.

೩೮. ಮಹಿಮಾಕಾರ ಶಿವಾಚಾರ್ಯ.

೮೯. ಶಿವಲಿಂಗ ಶಿವಾಚಾರ್ಯ.

೯೦. ನಯನತ್ರಯ ಶಿವಾಚಾರ್ಯ.

೯೧. ವಿರೂಪಾಕ್ಷ ಶಿವಾಚಾರ್ಯ.

೯೨. ಮರುಳಸಿದ್ಧ ಶಿವಾಚಾರ್ಯ.

೯೩. ಮಹಾಂತ ಮಲ್ಲಿಕಾರ್ಜುನ ಶಿವಾಚಾರ್ಯ.

೯೪. ವೃಷ್ಟಿ ಮಲ್ಲಿಕಾರ್ಜುನ ಶಿವಾಚಾರ್ಯ.

೯೫. ಶಿವಲಿಂಗ ಶಿವಾಚಾರ್ಯ.

೯೬. ಬೃಹಚ್ಚೆನ್ನವೀರ ಶಿವಾಚಾರ್ಯ.

೯೭. ಪರ ಚನ್ನವೀರ ಶಿವಾಚಾರ್ಯ.

೯೮. ಸಿದ್ಧಲಿಂಗ ಶಿವಾಚಾರ್ಯರು.

೯೯. ಮರಳಸಿದ್ಧ ಶಿವಾಚಾರ್ಯ.

೧೦೦. ಜಟಾಗುರುಸಿದ್ಧ ಶಿವಾಚಾರ್ಯ.

೧೦೧. ಚನ್ನ ವೃಷಭ ಶಿವಾಚಾರ್ಯ.

೧೦೨. ಸಿದ್ಧಲಿಂಗ ಶಿವಾಚಾರ್ಯ.

೧೦೩. ಚನ್ನ ವೃಷಭ ಶಿವಾಚಾರ್ಯ.

೧೦೪. ಚನ್ನವೀರ ಶಿವಾಚಾರ್ಯ.

೧೦೫. ಗುರುಸಿದ್ಧ ಶಿವಾಚಾರ್ಯ.

೧೦೬. ಮರುಳಸಿದ್ಧ ಶಿವಾಚಾರ್ಯ.

೧೦೭. ಚನ್ನ ವೃಷಭ ಶಿವಾಚಾರ್ಯ.

೧೦೮. ಸಿದ್ಧಲಿಂಗ ಶಿವಾಚಾರ್ಯ.

೧೧೦. ಮರುಳಾರಾಧ್ಯ ಶಿವಾಚಾರ್ಯ.

೧೧೧. ಮರುಳಸಿದ್ಧ ರಾಜ ದೇಶಿಕೇಂದ್ರ ಶಿವಾಚಾರ್ಯ.[೩]

## ಆ. ಉಜ್ಜಿನಿಯ ಶಾಸನ ಸಾಹಿತ್ಯ

ಶಾಸನಗಳು ಸಂಸ್ಕೃತಿಯ ಭವ್ಯ ಸಂಪತ್ತು. ಆದ್ದರಿಂದ ಶಾಸನ ಸಾಹಿತ್ಯಕ್ಕೆ ಮನುಕುಲದ ಎಲ್ಲಾ ಚರಿತ್ರೆಗಳನ್ನು ಪ್ರತಿಬಿಂಬಿಸುವ ಕನ್ನಡಿಗಳು ಎಂದು ಕರೆಯುತ್ತಾರೆ. ಇಂತಹ ಶಾಸನಗಳು ಉಜ್ಜಿನಿ ಗ್ರಾಮದಲ್ಲಿಯೂ ನೋಡಬಹುದಾಗಿದೆ. ಅವುಗಳು ಈ ಕೆಳಗಿನಂತಿವೆ.

೧. ಉಜ್ಜೈನಿಯ ಗುಡಿ ಕಂಬದ ಶಾಸನ :

"ಶ್ರೀ ಮತು ಯಾದವ ನಾರಾಯಣಂ ಭುಜ ಬಳ ಪ್ರದ ಪ್ರತಾಪ ಚಕ್ರವರ್ತಿ ಶ್ರೀ ವೀರ ಮಹದೇವರಾಯ ರಾಜ್ಯೋದಯ ಶಕ, ಒಂಭತ್ತನೇಯ ವಿಭವ ಸಂವತ್ಸರದ ಕಾರ್ತೀಕ ಬಹುಳ ಅಮವಾಸ್ಯೆ ಸೋಮವಾರ ಸೂರ್ಯ-ಗ್ರಹಣದಲೂ ಸ್ವಸ್ತಿ ಶ್ರೀ ......ಶ್ರೀ ಮನು ಮಹಾ ಪ್ರಧಾನಂ ಸರ್ವಾಭಿಕಾರಿ ತಿಪ್ಪೆರಸರೆ ಅಳಿಯ ಚಾಮಂಡರಸರು ಪಾಂಡ್ಯನಾಡ ಸರ್ವಾಧಿಕಾರಿಮಂ ಮಾಡುತ್ತಿದ್ದಲ್ಲಿ ಅವರಕೆಯಲು ಪಡಿಕೋಣೆಯಾಗಿ ಸುಂಕಾಧಿಕಾರವಂ ಮಾಡುತ್ತಿದ್ದು ಚಿಗುಟೇರಿ ಸುಂಕದ ಚಾವುಂಡರ ಉಜ್ಜೈನಿಯ ಶ್ರೀ ಮಲ್ಲಿಕಾರ್ಜುನ ದೇವರ ಶ್ರೀ ಕಾರ್ಯಕ್ಕೆ ಬಿಟ್ಟ ಧರ್ಮಪುರದ ಗುಡುದಳು ಕನರಗೋಪಾಯ್ಯ ವಿನಭ್ಯ ವಹಾರವೆಂತೆಂದೆಡೆ ಸುಂಕ ಶ್ರೀ ಮಾಮದ್ಯಂ ದೇವರಿಗೆ ಧಾರಪೂರ್ವಕವಾಗಿ ಕೊಟ್ಟರು. ಈ ಧರ್ಮವನು ಆರುಮೀರಿದಡಂ ಮಹಾಗಣಂಗಳು ನಡೆಸುವುದೂ ಸ್ವದತ್ತಂ ಪರದತ್ತೆಂಯ್ಯ ಹೇರೇತಿ ವಸುಂಧರಾ ಸಸ್ಟಿರ್ವ್ವಾ ವರುಶ ಸಹಾ ಪ್ರಾಣಯಿಷ್ಟಾಮಾಂ, ಜಾಯತೆ ದೇವಗಿರಿಯಾದವ ಮಹಾದೇವನ ಕಾಲ ಕ್ರಿ.ಶ. ೧೨೬೮ ಈ ಶಾಸನದ ಪ್ರಕಾರ ಉಜ್ಜೈನಿ ಶ್ರೀ ಮರುಳಸಿದ್ದೇಶ್ವರ ದೇವಾಲಯದ ಪೂರ್ವ ಹೆಸರು 'ಮಲ್ಲಿಕಾರ್ಜುನ' ಎಂದು."

ಉಜ್ಜೈನಿಯ ದೇಗುಲದ ಕಟ್ಟೆ ಮೇಲಿನ ಶಾಸನ

"ರಾಜಾಧಿರಾಜ ವೀರಪ್ರಪತಾಪ ವೀರಸದಾಶಿವ ಮಹಾರಾಯರು ವಿದ್ಯಾರಂವಾಗಳ ಪ್ರತಿನಾಮವಾದ ವಿದ್ಯಾನಗರಿಯ ರತ್ನ ಸಿಂಹಾಸನದಲ್ಲಿ ಸುಖ ಸಂಕಥಾ ವಿನೋದದಿಂದ ಪೃಥ್ವಿ ರಾಜ್ಯಂಗೈಯುತ್ತಿರಲು, ಹಡಪದ ಬಯ್ಯಪ್ಪನಾಟಕ ಅಯ್ಯನ ಕುಮಾರ ಕೃಷ್ಣಪ್ಪನಾಯಕ ಅಯ್ಯನವರಿಗೆ ಪರಿಪಾಲಿಸಿದ. ರಾಯ ರಾಯ ರಾಜಧಾನಿಯಾದ ಕೋಗಳಿಯ ಪೆಂಚಿಯ ಕೆಸಲುವ ಕೊಟ್ಟೂರ ಸೀಮೆಯೊಳಗಣ ಉಜ್ಜೈನಿಯ ಮಲ್ಲಿಕಾರ್ಜುನ ಲಿಂಗಕ್ಕೆ. ನಾಗೇನಹಳ್ಳಿ ಜೀರ್ಣದ್ಧಾರ ಮಾಡಿ ಪುರವನ್ನು ಕಟ್ಟಿಸಿ ಪ್ರತಿಷ್ಠೆಯಂ ಮಾಡಿರುವುದಕ್ಕೆ ಕೃಷ್ಣಪ್ಪನಾಯಕ ಅವರಿಗೆ ಆಯುರಾರೋಗ್ಯ ಧರ್ಮದ ಕೀರ್ತಿಗೆ ಪುಣ್ಯಬೇಕೆಂದು ಶ್ರೀ ನೈವೇದ್ಯಕ್ಕೆ ಸಮರ್ಪಿಸಿದರು."

ಉಜ್ಜೈನಿ ಗುಡಿಯ ಪೂರ್ವದ್ವಾರದ ಕಟ್ಟೆಯ ಮೇಲಿನ ಶಾಸನ :

'ಶ್ರೀ ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀ ಅಚ್ಯುತರಾಯ ಮಹಾರಾಯ ಕ್ರಿ.ಶ. ೧೫೨೯-೪೨ ರಲ್ಲಿ ತನ್ನ ಪ್ರಮುಖ ಬೆಂಬಲಿಗ

ಜರ್ಮಲೆಯ ನಾಯಕ ಸಿದ್ಧರಾಜ ನಾಯಕನ ಮಗ ಪೆನ್ನಪ್ಪ ನಾಯಕನ ಜೊತೆಗೆ ಉಜ್ಜಿನಿಗೆ ಭೇಟಿಕೊಟ್ಟಾಗ ಮಾಡಿದ ಶಾಸನ'.

**ಉಜ್ಜಿನಿ ಗುಡಿಯ ಪ್ರಕಾರ ಶಾಸನ**

ಇದೇ ತಾಲೂಕಿಗೆ ಸೇರಿದ ಅಂಬಳಿ ಗ್ರಾಮದ ಶ್ರೀ ಕಲ್ಲೇಶ್ವರ ದೇವಾಲಯದ ತೂಲೆ ಶಾಸನದ ಪ್ರತಿರೂಪ.-

> 'ಜಗದ್ದಳ ಪಾಂಡ್ಯನು ಕೊಟ್ಟೂರು ಬಳಿ ಅಂಬಳಿಯ ಕಲ್ಲೇಶ್ವರ ದೇವರ ಸೇವೆಗೆದತ್ತಿಕೊಟ್ಟ ಶಾಸನ. ಉಜ್ಜಿನಿ ಗ್ರಾಮದಲ್ಲಿ ಈ ಗುಡಿಯಲ್ಲಿರುವುದು ಶ್ರೀ ಮಲ್ಲಿಕಾರ್ಜುನ ಲಿಂಗ. ಇದು ೧೩ನೇ ಶತಮಾನದಿಂದ ೧೬ನೇ ಶತಮಾನವರೆಗೂ ಅದೇ ಹೆಸರಿನಿಂದ ಕರೆಯಲ್ಪಟ್ಟಿದೆ'.

ಶ್ರೀ ಮರುಳಸಿದ್ದೇಶ್ವರರು ಅಲ್ಲಿಗೆ ಬಂದು ನೆಲಸಿದ ತರುವಾಯ ಈ ಹೆಸರು ಬದಲಾಗಿ ಮಲ್ಲಿಕಾರ್ಜುನ ಮರುಳಸಿದ್ದೇಶ್ವರ ಆಗಿರಬೇಕು. ಶ್ರೀ ಮರುಳಸಿದ್ದೇಶ್ವರರ ಪೌರಾಣಿಕ ಚರಿತ್ರೆಯಿಂದಲೂ ಗೊತ್ತಾಗುತ್ತದೆ. ಕೊಟ್ಟೂರಿನ ಶ್ರೀ ವೀರಭದ್ರ ದೇವರ ಗುಡಿಯಲ್ಲಿ ಪಂಚಗಣಾಧೀಶ್ವರರಲ್ಲಿ ಒಬ್ಬರಾದ ಶ್ರೀ ಗುರುಬಸವೇಶ್ವರರು ಉಳಿದುಕೊಂಡ ಮೇಲೆ ಆ ಗುಡಿ ಮಠವಾಯಿತು. ಅದಕ್ಕೆ ಹಿರೇಮಠವೆಂದು ಕರೆದಂತೆ. ಶ್ರೀ ಮಲ್ಲಿಕಾರ್ಜುನ ದೇವರ ಗುಡಿಯಲ್ಲಿ ಶ್ರೀ ಮರುಳುಸಿದ್ದೇಶ್ವರರು ಉಳಿದುಕೊಂಡ ಮೇಲೂ ಇದಕ್ಕೂ ಸಿದ್ದೇಶ್ವರ ಮಠವೆಂದು ಕರೆದಿರಬೇಕು. ಈ ನಂತರ ಇದಕ್ಕೆ ಉಜ್ಜಿನಿ ಸದ್ದರ್ಮ ಪೀಠವೆಂದು ಸಂಸ್ಥಾನವೆಂದು ಕರೆದಿರಬೇಕು.

ಬಳ್ಳಾರಿ ಜಿಲ್ಲಾ ಹರಪನಹಳ್ಳಿ ತಾಲ್ಲೂಕು. ಕಡಬಗೆರೆ ಗ್ರಾಮದಲ್ಲಿರುವ ಕ್ರಿ.ಶ. ೧೬೬೦ರ ಶಾಸನವು ಶ್ರೀ ವೀರ ವೆಂಕಟಪತಿ ಮಹದೇವರಾಯನ ಪುತ್ರ ಬಾಗಳಿಯ ಬಸವಪ್ಪ ನಾಯಕನು ಗಿರಿ ಮಲ್ಲಪ್ಪನ ಮಗ ಉಜ್ಜಿನಿ ಸಿಂಹಾಸನದ ಶಿಷ್ಯ ಬಸವಯ್ಯನ ಮಗ ತಿರುಕಪ್ಪೆಗೆ ಕಸವನಹಳ್ಳಿಯನ್ನು ಜೀರ್ಣೋದ್ಧಾರ ಮಾಡಿದ್ದಕ್ಕಾಗಿ ಕೆಲವು ಭೂಮಿಯನ್ನು ದಾನ ಕೊಟ್ಟಿರುವುದಾಗಿ ತಿಳಿಸುತ್ತದೆ. ಈ ಶಾಸನದಲ್ಲಿ ಶ್ರೀ ಮರುಳಸಿದ್ದೇಶ್ವರ ಸ್ವಾಮಿಯ ಸುಕ್ಷೇತ್ರಕ್ಕೆ ಉಜ್ಜಿನಿ ಎಂಬ ಹೆಸರು ಬಳಕೆಯಾಗಿರುವುದನ್ನು ಹಾಗೂ ಪ್ರಚಲಿತದಲ್ಲಿರುವ ಪಂಚಪೀಠಗಳಲ್ಲಿ ಒಂದಾದ ಉಜ್ಜಿನಿ ಸಿಂಹಾಸನ ಪೀಠದ ಹೆಸರು ಬಂದಿರುವುದನ್ನು ಕಾಣಬಹುದಾಗಿದೆ."

**ಚೆನ್ನಮ್ಮಾಜಿ ಶಾಸನ (೧೭೬೩)**

ಸುಮಾರು ಕ್ರಿ.ಶ. ೧೭೬೩ ಉಜ್ಜಿನಿ ಮತ್ತು ಚೆನ್ನಮ್ಮಾಜಿ ಸಮಾಧಿ ಹಾಗೂ ಶಿವತತ್ವ ರತ್ನಾಕರ ಗ್ರಂಥದ ಪ್ರಕಾರ ಕೆಳಜಿ ಚೆನ್ನಮ್ಮಾಜಿ ತಮ್ಮ ಸಂಸ್ಥಾನದ ಅಸ್ಥಿರತೆ ಹಾಗೂ ಅನಾರೋಗ್ಯದಿಂದ ಉಜ್ಜಿನಿಗೆ ಬಂದು ಪೀಠಾಚಾರ್ಯರ ಆಶ್ರಯದಲ್ಲಿ ತಂಗಿ ಉಜ್ಜಿನಿಯಲ್ಲಿಯೇ ಮರಣವನ್ನು ಹೊಂದಿದ ಇತಿಹಾಸವನ್ನು ಹೇಳುತ್ತದೆ. ಈ ಶಾಸವನ್ನು ಈಗಲೂ ಉಜ್ಜಿನಿಯಲ್ಲಿ ನೋಡಬಹುದು.

## ೩. ಕಥೆ, ಲಾವಣಿ

ಮೂಲತಃ ಜನಪದ ಸಾಹಿತ್ಯ ಕಲೆಗಳ ಉದ್ದೇಶ ಮನಾನಂದ ಮತ್ತು ಮನೋವಿಕಾಸ, ಆದಿಮಾನವ, ಬುಡಕಟ್ಟಿನ ಮಾನವ, ಗ್ರಾಮ ಮಾನವನೆಂದೂ ತನ್ನ ಕಲೆ ಸಾಹಿತ್ಯಕ್ಕೆ ಪ್ರತಿಫಲ ಬಯಸಿದ್ದಿಲ್ಲ. ಆದರೆ ನಗರ ಮಾನವ ಪ್ರತಿಯೊಂದಕ್ಕೂ ಪ್ರತಿಫಲ ಬಯಸುತ್ತಾನೆ. ಹಿಂದಿನವರು ಕಲೆ ಸಾಹಿತ್ಯ ಆರಾಧನೆಯ ವಸ್ತು ಎಂದು ಬಗೆದಿದ್ದರು. ಆಗಿನ ಸಂದರ್ಭ ಬೇರೆಯಾಗಿತ್ತು. ಆಸೆ, ಆಕಾಂಕ್ಷೆಗಳು ಸಮಸ್ಯೆ, ಜೀವನದೊತ್ತಡಗಳು ಇಂದಿನಷ್ಟು ಇರಲಿಲ್ಲ. ಜೀವನ ದೃಷ್ಟಿಕೋನವೇ ಬೇರೆಯಾಗಿತ್ತು. ಅಲ್ಲದೆ ಆ ಜನರು ದೇವಾಲಯ ಕೋಟೆ ಕೊತ್ತಲಗಳನ್ನು ಕಟ್ಟಿ. ಪರಂಪರೆಯ ಕಥೆ, ಹಾಡು, ಗಾದೆಗಳನ್ನು ಸೃಷ್ಟಿಸಲು ಸಾಧ್ಯವಾಯಿತು. ಅದು ಇಂದು ಕೂಡ ಜನಪದರ ಬಾಯಲ್ಲಿ ಜೀವಂತವಾಗಿ ಉಳಿದುಕೊಂಡು ಬಂದಿದೆ.

### ಜರಿಮಲೆ ನಾಯಕರ ನಾಗೇನಹಳ್ಳಿ ಕಾಳಗದ ಕಥೆ ಮತ್ತು ಲಾವಣಿ

ನಾಗೇನಹಳ್ಳಿ ಉಜ್ಜಿನಿಗೆ ಎರಡು ಮೈಲು ದೂರದಲ್ಲಿದೆ. ಅಲ್ಲೊಂದು ಪುರಾತನ ಪಾಳೆಯ ಪಟ್ಟಾದ ಈ ಗ್ರಾಮದ ಹತ್ತಿರ ಒಂದು ಗುಡ್ಡವಿದೆ. ಅದರ ಕೆಳಗಡೆ ಈ ಊರು ನಾಗೇನಹಳ್ಳಿಯಾಗಿದೆ. ಹಿಂದೆ ಜರಿಮಲೆ ನಾಯಕ ಅಲ್ಲಿಗೆ ಬೇಟೆಗೆ ಹೋಗಿದ್ದನಂತೆ. ಅದೇ ಸಮಯಕ್ಕೆ ನಾಗೇನಹಳ್ಳಿ ಪಾಳೆಯಗಾರನೂ ಬೇಟೆಗೆ ಬರುತ್ತಾನೆ. ಆಗ ಬಳಿ ಹಂದಿಯೊಂದು ಓಡಿ ಹೋಗಿ ಪೆಳೆಯಲ್ಲಿ ಅಡಗಿಕೊಂಡಿತು. ಇಬ್ಬರೂ ಅದನ್ನು ಬೆನ್ನಟ್ಟಿ ಹೋದರು. ಪೆಳೆಯನ್ನು ಹೊಕ್ಕು ನೋಡುತ್ತಾರೆ. ಆ ಪೆಳೆಯ ಮರದ ಕೊಂಬೆಗೆ ನೇತಾಡುವ ತೊಟ್ಟಿಲಲ್ಲಿ ಉಜ್ಜಿನಿಯ ಗುರುಗಳು ಕುಳಿತಿದ್ದರು. ಗುರುಗಳು ಇವರನ್ನು ನೋಡಿ ಇಲ್ಲಿಂದಲೇ ಗುಡಿ ಸ್ಥಾಪನೆ ಮಾಡಬೇಕೆಂದು ಆದೇಶಿಸಿದರಂತೆ. ಎರಡು ಪಂಗಡದ ರಾಜರು ಮುಂದಾದರು. ಪರಸ್ಪರ ಕಾಳಗ ಮಾಡಿ ಅದರಲ್ಲಿ ಯಾರೂ ಗೆಲ್ಲುವರೋ ಅಂಥವರು ಗುಡಿಕಟ್ಟಬೇಕೆಂದು ಷರತ್ತು ಹಾಕಿದರು. ಆ ಕೂಡಲೇ ಜರಿಮಲೆ ನಾಯಕ ಉಡುದಾರವನ್ನು ಕಿತ್ತು ಎಸೆದು. ನಾಗೇನಹಳ್ಳಿ ಪಾಳೆಯಗಾರನನ್ನು ಗೆಲ್ಲುವವರೆಗೂ ತಾನು ಉಡುದಾರವನ್ನು ಕಟ್ಟುವುದಿಲ್ಲವೆಂದು ಪ್ರತಿಜ್ಞೆ ಮಾಡಿದ. ಅನಂತರ ಯುದ್ಧದಲ್ಲಿ ಜಯಗಳಿಸದೇ ಇದ್ದುದರಕ್ಕಾಗಿ ಅಂದಿನಿಂದ ಇಂದಿನವರೆಗೂ ಈ ವಂಶಸ್ಥರು ಉಡುದಾರ ಕಟ್ಟುವುದಿಲ್ಲ. ತನ್ನ ಊರಿಗೆ ಬಂದ ಜರಿಮಲೆ ನಾಯಕ ಯುದ್ಧಕ್ಕೆ ಸನ್ನದ್ಧರಾಗಲು ತನ್ನ ದಂಡಿಗೆ ಆದೇಶವನ್ನಿತ್ತನು. ಕೊಟ್ಟೂರು ಬಲ್ಲಾರಿ ಗೋಣ್ಯನೆಂಬುವ ವೀರನಿಗೆ ಹೇಳಿ ಕಳಿಯಿಸಿದ. ಬಲ್ಲಾರಿ ಗೋಣ್ಯನು ಜರಿಮಲೆ ನಾಯಕನ ಮಾತಿನಂತೆ ತನ್ನ ತಾಯಿಯ ಆಶೀರ್ವಾದ ಪಡೆದು. ಜಯ ಪಡೆದೇ ತಾಯಿಯ ಮುಖ ನೋಡುವುದಾಗಿ ಶಪಥಗೈದು ಯುದ್ಧಕ್ಕೆ ಬಂದ, ಇತ್ತ ನಾಗೇನಹಳ್ಳಿಯ ತಳವಾರ ಓಬಣ್ಣ, ಮ್ಯಾಸರ ಓಬವ್ವನೆಂಬ ಯುದ್ಧ ತಂತ್ರಜ್ಞರ ಮುಂದೆ ಜರಿಮಲೆದಂಡು ದಿಕ್ಕು ಕಾಣದಾಯಿತು. ಬಲ್ಲಾರಿ ಗೋಣ್ಯ ವೀರಾವೇಶದಿಂದ ಕಾದಾಡಿ ೧೦,೦೦೦ ದಂಡನ್ನು ದಿಕ್ಕಾಪಾಲು ಮಾಡಿದ.

ಬಲ್ಲಾರಿ ಗೋಣ್ಯ ಗೇಲುವಿನ ಸಂಕೇತಕ್ಕಾಗಿ ನಾಗೇನಹಳ್ಳಿ ದೇವಾಲಯದಿಂದ ಪಲ್ಲಕ್ಕಿಯೊಂದನ್ನು ಹೊತ್ತುಕೊಂಡು ಬರುತ್ತಿರುತ್ತಾನೆ. ಪೆಳೆಯಲ್ಲಿ ಅಡಗಿದ್ದ ವೈರಿಯೊಬ್ಬ ಬಲ್ಲಾರಿ ಗೋಣ್ಯನ ಮೇಲೆ ಕೋವಿಯಿಂದ ಗುಂಡು ಹಾರಿಸಿದ. ಈ ಶಬ್ಧ ಕೇಳಿ ಬಲ್ಲಾರಿ ಗೋಣ್ಯನ ಗೆಳೆಯ ಶಿವಲಿಂಗ ಬಂದು ನಿನಗೆ ಗುಂಡು ಹಾರಿಸಿದವನ ಸುಳಹು ಹೇಳು ಎಂದು ಅರ್ಭಟಿಸಿದ. ಓಡಿ ಹೋಗುತ್ತಿದ್ದ ವೈರಿಯನ್ನು ಹಿಡಿದು ಕೊಲ್ಲಲು ಉದ್ಯುಕ್ತನಾದ. ಆದರೆ ಸಾವಿನ ಮಡಿಲಲ್ಲಿದ್ದ ಸ್ನೇಹಿತನ ಶವ ಸಂಸ್ಕಾರಕ್ಕೆ ಅಣಿ ಮಾಡಿ ಚಿತೆ ಉರಿಸಿದೆ. ಗೋಣ್ಯನ ಕತ್ತಿ ತನ್ನನ್ನು ಚಿತೆಯಲ್ಲಿಯೇ ಹಾಕಲು ಕೇಳಿಕೊಂಡಿತು. ಇದನ್ನೇ ಕೇಳಿದ ಶಿವಲಿಂಗ ಜೀವದ ಗೆಳೆಯ ನಿಲ್ಲದ ಮೇಲೆ ತನ್ನ ಬಾಳು ವ್ಯರ್ಥವೆಂದರಿತು. ಕತ್ತಿಯೊಂದಿಗೆ ಚಿತೆಯೊಳಗೆ ಹಾರಿಬಿಟ್ಟ. ಇದೆಲ್ಲವನ್ನು ನೋಡಿದ ವೈರಿ ಕೋವಿಕಾರನಿಗೆ ಮನನೊಂದು. ಚಿತೆಯ ಮೇಲೆ ಹೂವಿನ ಮಳೆ ಸುರಿಯಿತು. ಇದೇ ಜರಮಲಿ-ನಾಗೇನಹಳ್ಳಿ-ಪಾಳೆಯಗಾರರ ಕಥೆ.[೬]

**ನಾಗೇನಹಳ್ಳಿ ಜರಿಮಲೆ ನಾಯಕರ ಕಾಗದ ಕಥೆಯ ಲಾವಣಿ ರೂಪ**

ಜರಿಮಲೆ ನಾಯಕ ತನ್ನ ದಂಡನ್ನು ಕುರಿತು ನಾಗೇನಹಳ್ಳಿ ಕಾಳಗಕ್ಕೆ ಸಿದ್ಧರಾಗಿರಿ ಎಂದು ಹೇಳಿದ, ಸುತ್ತಮುತ್ತಲಿನ ದೇಶದ ಸೈನ್ಯಾಧಿಪತಿಗಳು ದಂಡನ್ನು ಕುರಿತು.

೧. ನಾಗೇನಹಳ್ಳಿದೊಂದು ಈಳೇವ ಹಿಡಿದೀನಿ
ಒಪ್ಪಿತೋ ಒಪ್ಪಲಿಲ್ಲೊ ಮಕ್ಕಳಿರಾ ||

೨. ಜರ್ಮಲೆ ಗೋದೇವಪ್ಪಾ ವರ್ಮಲೆ ಗೋದೇವಪ್ಪಾ
ನಾಗೇನಹಳ್ಳಿಗೆ ನಾ ಒಲ್ಲೆವೆಪ್ಪಾ ||

ಕೋಲು ಕೋಲೆನ್ನ ಕೋಲೆ ರನ್ನಾದ ಕೋಲೆ ಕೋಲೆನ್ನ.
ಕೋಲು ಸಿರಿ ಗಂಧಾದ ಕೋಲೆ ಕೋಲೆನ್ನ ಕೋಲೆ.||

೩. ಹಿಡಿಯೊಲೆ ರಣಗಾಳಿ ಬಡಿಯೊಲೆ ಹುಲಿ ತಪ್ಪಡಿ.
ದಾದಯ್ಯ ರಂಗನ ದರ್ಶನಕ್ಕೋ ಗೋಣ ನಡಿ
ಕೋಲೆ ಕೋಲೆನ್ನ ಕೋಲೆ ರನ್ನಾದ ಕೋಲೆ ಕೋಲೆನ್ನ
-----------------------" ----------------------------||

ಹೀಗೆ ದಂಡಿನವರು ನಾಗೇನಹಳ್ಳಿಯ ಹೆಸರು ಕೇಳುತ್ತಲೇ ಭಯ ಭೀತರಾದರು. ಬೇರೆಲ್ಲಿಗಾದರೂ ಯುದ್ಧಕ್ಕೆ ಹೋದೆವು. ನಾಗೇಹಳ್ಳಿಗೆ ಹೋಗಲಾರವೆಂದು. ಹೇಳಿದರು. ಆಗ ಮಹಾ ಪರಾಕ್ರಮಿ ಎನಿಸಿದ ಕೊಟ್ಟೂರು ಬಲ್ಲಾರಿ ಗೋಣೆಪ್ಪನ ಹತ್ತಿರ ಬಂದರು. ಬಲ್ಲಾರಿ ಗೋಣೆಪ್ಪನ ತಾಯಿ ಮಗನನ್ನು ಕುರಿತು.

೪. ಎಳೆಪ್ಪಾ ಮದಕ್ಕೆರಿ ಎಷ್ಟು ಹೊತ್ತು ಮಲಗಿಯಾ
ಮಾಲೆ ಬಂದಾವೆ ನಿನ್ನ ಸದರಿಗೆ
ಕೋಲೆ ಕೋಲೆನ್ನ ಕೋಲೆ ರನ್ನಾದ ಕೋಲೆ ಕೋಲೆನ್ನ
ಕೋಲೆ ಸಿರಿಗಂಧಾದ ಕೋಲೆ ಕೋಲೆ ಕೋಲೆನ್ನ ಕೋಲೆ.||

೫. ಭಾರಿ ಭೂಪ ಎಳೆ ಮೀಸೆ ತಿರವುತ್ತ ಎದ್ದನು
ಗಗ್ಗರಿ ಕಾಲ್ ಹುಡುಗುರನ ಕುಣಿಸುತ್ತ
ಕೋಲೆ ಕೋಲೆನ್ನ ಸಿರಿಗಂಧಾದ ಕೋಲೆ ||

೬. ಮಾಯ ಕೊಂಡದ ಹುಡಗರು ಮಾತಲಿ ಬಲುಜಾಣರು
ಮಾವಿನ ಎಲೆಯ ಗೋಲೆ ಬರೆದಾರು
ಕೋಲು ಕೋಲೆನ್ನ.||

ಈ ವಿಷಯವನ್ನು ತಿಳಿದ ಬಲ್ಲಾರಿ ಗೋಣ್ಯ ಜರಿಮಲೆ ನಾಯಕರನ್ನು ಕುರಿತು.

"ತಾನು ಒಂದು ಪಕ್ಷ ಯುದ್ಧದಲ್ಲಿ ಮಡಿದರೆ, ತನ್ನ ಇಬ್ಬರು ವೇಶ್ಯಯರಿಗೆ ಇಬ್ಬರು ಹೆಂಡರಿಗೆ ಮತ್ತು ತಾಯಿಗೆ ಎರೆಡು ಆನೆ ಹೊರುವಷ್ಟು ಹಣ, ಎರಡು ಹಗೇವು ಜೋಳ ಮತ್ತು ಎರಡು ಕರೆಯುವ ಎಮ್ಮಿಯಂತೆ ಒಬ್ಬರಿಗೆ ಕೊಡಬೇಕೆಂದು" ಒಪ್ಪಂದ ಮಾಡಿಕೊಂಡ. ಆಗ ಬಲ್ಲಾರಿ ಗೋಣೆಪ್ಪನ ತಾಯಿ ಮಗನನ್ನು ಕುರಿತು ಈ ರೀತಿ ಹೇಳುತ್ತಾಳೆ.

೭. ಮುಂದಕ್ಕೆಯಿಟ್ಟಂತಹ ಕಾಲು ಹಿಂದಕ್ಕೆ ಇಟ್ಟರೆ
ಗೋಣ್ಯ ಬರುವದಾರಿಗೆ "ದೋಣಿ" ಕೆತ್ತಿಸೇನು
ಬಲ್ಲಾರಿ ಗೋಣ್ಯ ನಾಯಿ ದೋಣ್ಯಾಗೆ ಅಂಚೆರಿ ಹಾಕಿಸೇನು
ಕೋಲು-ಕೋಲೆನ್ನ.

ಆಗ ಬಲ್ಲಾರಿ ಗೋಣ್ಯ ತಾಯಿಯನ್ನು ಕುರಿತು.

೮. ಕಾಸಿನ್ಯ ಹೆಣ್ಣು ಮಗಳೇ ನೀನು ಏಸು ಮಾತ್ನಾಡದೀರೆ
ತಿರುಗಿ ಬಂದು ನಿನ್ನ "ಮಾರಿ" ನೋಡುವನೆ
ಹಡೆದವ್ವ ತಾಯಿ ಮತ್ತೆ ನಿನ್ನ ಮಾರಿ ನೋಡುವನೆ
ಕೋಲು ಕೋಲುನ್ನ.

ಜರಿಮಲೆ ನಾಯಕ ೨೦,೦೦೦ ದಂಡಿನೊಂದಿಗೆ ಬಲ್ಲಾರಿ ಗೋಣ್ಯಯ ಸೇನಾಧಿಪತ್ಯದಲ್ಲಿ ಒಂದು ಉಜ್ಜಿನಿ ಕೆರೆಯಲ್ಲಿ ಡೇರಿ ಹೊಡೆದ.

## ಮ್ಯಾಸರ ಓಬವ್ವ ಮತ್ತು ಓಬಣ್ಣ

ನಾಗೇನಹಳ್ಳಿ ಕೋಟೆಯ ಮೇಲೆ ಮ್ಯಾಸರ ಓಬವ್ವ ಬಹಳ ದಿಟ್ಟತನದ ಹೆಂಗಸು, ಕೋಟೆಯ ರಕ್ಷಣೆಗಾಗಿ ನಡುಕಟ್ಟಿ ನಿಂತಿದ್ದಾಳೆ. ಕ್ವಾಟಯನ್ನು ಏರಿ ಬರುವ ಶತ್ರು ಸೈನ್ಯದ ಮೇಲೆ ಎರಗಿ ಸುಮಾರು ೩೦೦೦, ದಂಡನ್ನು ಕೊಂದಳು.

೯. ಮ್ಯಾಸರ ಓಬವ್ವ ಭಾರಿ ಬಲವಂತಾಳು
ಮೂರು ಸಾವಿರ ದಂಡ್ನ ರಾಗಿ ಕಾಳೀಲೆ ಕೊಂದಾಳು.
ಕೋಲು ಕೋಲೆನ್ನ

೧೦. ತಳವಾರ ಓಬಣ್ಮ ಭಾರಿ ಬಲವಂತಾನು ಮುನ್ನೂರು
ಮಣ ಮದ್ದು ಗುಂಡು ಹೊತ್ತಾನು

ತಳವಾರ ಓಬಣ್ಣ ಬಗಲಾಗ ಬಾರಿಕೋಲು
ಹಿಡಿಕೊಂಡು ಹಲ್ಲುಕಿಸಿದಾನು
ಕೋಲು ಕೋಲೆನ್ನ.

ಇದರಿಂದ ಜರಿಮಲೆ ದಂಡು ನಿರ್ನಾಮವಾಗಿ ಹಿಂದಕ್ಕೆ ಪಲಾಯನ ಮಾಡಿತು. ಪಾಳೆಯಗಾರ ಉಪಾಯವಿಲ್ಲದೆ ಹಿಂದಕ್ಕೆ ಓಡಿದ ಇಷ್ಟು ಹೊತ್ತಿಗೆ ಬಲ್ಲಾರಿ ಗೋಣಿಗೆ ಮದವಿಳಿದು ಎದ್ದು ನೋಡುತ್ತಾನೆ. ಎಲ್ಲಿ ನೋಡಿದರೂ ಸೋಲಿನ ಭೀಕರತೆಯ ದೃಶ್ಯ ಇದ್ದಲ್ಲಿಂದಲೇ ಸುರಂಗ ಹೊಡೆದು ನಾಗೇನಹಳ್ಳಿಗೆ ಬಂದು ಕೋಟೆಯನ್ನು ಕೆಡವಿದಂತೆ ಒಬ್ಬನನ್ನು ಎದುರಿಸುವುದು ಅದ್ಯಾವ ದೊಡ್ಡಕೆಲ್ಸ ಎಂದು ನಾಗೇನಹಳ್ಳಿಯ ದೊರೆ ಗೋಣಿಯನ್ನು ಕುರಿತು ಈ ರೀತಿ ಹೇಳುತ್ತಾನೆ.

೧೧. ಹತ್ತು ಸಾವಿರ ದಂಡು ನೆಮೆದು ಒಂದೇ ಜನ್ಮ
ಗೋಣಿ ನಿಮ್ಮದು ಮಗ್ಗಲ ಎಲುಬು ನುಗ್ಗದುಳಿಸೇವೂ
ಪಕ್ಕದ ಎಲುಬ ಮುರಿದುಳಿ ಸೇವೂ ಬಲ್ಲಾರಿ ಗೋಣ್ಯಾ
ಕೋಲು ಕೋಲೆನ್ನ.

## ಬಲ್ಲಾರಿ ಗೋಣ್ಯನ ಪರಾಕ್ರಮ

ಈ ಮಾತನ್ನು ಕೇಳಿ ಬಲ್ಲಾರಿ ಗೋಣ್ಯ ವೀರಾವೇಶದಿಂದ ತನ್ನ ಸಾಮರ್ಥ್ಯ ತೋರಿಸಿಯೇ ಬಿಟ್ಟ ಹೇಗೆಂದರೆ.

೧೨. ಬಾಯಾಗಳ ಮಾತು ಬಾಯೊಳಗೆ ಇದ್ದಂತೆ
ಹಿಂದಕ್ಕೆ ಎಂಟು ಮಳೆ ಸಿಗೆದಾನು ಬಲ್ಲಾರಿ ಗೋಣ್ಯಾ
ಕುದುರೆ ಕೋಡ್ವೆಳಿ ಹಿರಿದಾನು
ಕೋಲು ಕೋಲೆನ್ನ.

೧೩. ಹತ್ತು ಸಾವಿರ ದಂಡನ್ನೆಲ್ಲಾ ದಿಕ್ಕು ಪಾಲು ಮಾಡಿ
ಒಬ್ಬ ಸೂಳಿಗೂ ತಿಳಿಸಲಿಲ್ಲಣ್ಣ ಕಾಳಗದ ಸುದ್ದಿ
ಎಲ್ಲೆಲ್ಲಿಗೂ ನಿಲುಕಲಿಲ್ಲಣ್ಣಾ
ಕೋಲು ಕೋಲೆನ್ನ |

ಹೀಗೆ ಬಲ್ಲಾರಿ ಗೋಣಿ ಜರಿಮಲೆ ದಂಡಿಗೆ ಸಾಧ್ಯವಾಗದ ನಾಗೇನಹಳ್ಳಿ ದಂಡನ್ನು ಒಬ್ಬನೇ ಹೋರಾಡಿ ಸೋಲಿಸಿದ, ತನ್ನ ವಿಜಯದ ಸಂಕೇತವಾಗಿ ಅಲ್ಲಿಯ ದೇವಸ್ಥಾನದ ಪಲ್ಲಕ್ಕಿಯನ್ನು ಹೊತ್ತು ತರುತ್ತಾನೆ. ಅದನ್ನು ಹೊರಲು ಆನಿಕೆಗಾಗಿ ಅಲ್ಲಿಯೇ ಬೆಳೆದ ಹೊನ್ನೆಗಿಡದ ಬೇರನ್ನೆ ತೆಗೆದುಕೊಂಡು ಆ ಪೆಳೆಯಲ್ಲಿ ಒಬ್ಬ ಕೋವಿಕಾರ ಹೊಂಚುಹಾಕಿ ಕುಂತಿರುವುದನ್ನು ಬಿಲ್ಲಾರಿ ಗೋಣ್ಯಾ ಸೂಕ್ಷ್ಮ ದೃಷ್ಠಿಯಿಂದ ಗುರುತಿಸಿ ಆ ಕೋವಿಕಾರನನ್ನು ಕುರಿತು.

ಬಲ್ಲಾರಿ ಗೋಣ್ಯಾನು ಮರಣ

ಯಾವ ಸೀಮೆ ಗೆಣೆಯನೆಣ್ಣಾ ಯಾವ ಭೂಮಿ ಹಣೆಯನಣ್ಣಾ
ಸೀಗಿಯಾ ಪೆಳೆಯಾಗೆ ಅಡಗ್ಯಾನು ಕೋವಿಯ ಗೆಳೆಯ
ಲೆಕ್ಕಿಯ ಪೆಳೆಯಾಗೆ ಅಡಗ್ಯಾನು

ಎಂದು ಪೆಳೆಯಲ್ಲಿ ಅಡಗಿದ್ದ ಕೋವಿಕಾರವನ್ನು ಮತನಾಡಿಸಿ ಜೊತೆಯಲ್ಲಿ ಹೋಗಾಣ ಬಾ ಎಂದು ಕರೆಯುತ್ತಾನೆ. ಅದಕ್ಕೆ ಕೋವಿಕಾರ ಕೈಯಲ್ಲಿರಿವ ಆಯುಧವನ್ನು ತೆಗೆದು ಹಾಕಿದರೆ ಬರುವೆನೆಂದು ಹೇಳುತ್ತಾನೆ. ಅನಂತರ ಗೋಣಿ ಅದನ್ನು ಜನ್ಮ ಹೋಗುವವರೆಗೂ ತೆಗೆಯುವುದಿಲ್ಲವೆಂದು ಹೇಳಿದ. ಬಾಯಿಯೊಳಗಿನ ಮಾತು ಬಾಯಿಯೊಳಗೆ ಇದ್ದಂತೆ ಕೋವಿಕಾರ ಕೋವಿಯಿಂದ ಹೊಡೆದ, ಬಲ್ಲಾರಿ ಗೋಣ್ಯಾಗೆ ಗುಂಡು ತಾಕಿತು. ರಕ್ತ ಹರಿಯಿತು. ಗೋಣ್ಯಾನ ಗೆಳೆಯ ಶಿವಲಿಂಗನಿಗೆ ಕೋವಿಯ ಶಬ್ದ ಕೇಳಿ

೧೫. ಗುಂಡು ಹಾರಿದ ಶಬ್ದವನ್ನ ಯಾರು ಯಾರು ಕೇಳ್ಯಾರಣ್ಣಾ
ಜೀವ ಜಿವನದ ಗೆಳೆಯಾನು, ಶಿವಲಿಂಗ ಗೆಣೆಯಾ
ಪ್ರಾಣ ಜೀವದ ಗೆಳೆಯಾನು.

ಗೋಣೆಯನ್ನು ಕುರಿತು

೧೬. ನಿನ್ನ ಹೊಡೆದವನ ಗುರುತು ಹೇಳಣ್ಣಾ ಬಲ್ಲಾರಿ ಗೋಣ್ಯಾ
ನಿನ್ನ ಹೊಡೆದವನ ಗುರುತು ಹೇಳಣ್ಣಾ
ಅದಕ್ಕೆ ಗೋಣೆಯ ಉತ್ತರ.

೧೭. ನಿಲುವಂಗಿ ತೊಟ್ಟಾನ ನೀಲಗುದರಿಯಿಂದ್ವಾರ್‍ಯಾನ
ಬೆಳ್ಳಿ ಕಟ್ಟಿ ಕೋವಿಕಾರನು
ಕೋಲು - ರ - ಕೋ - ಸಿರಿ. ಗಂ. ಕೋಲೆ.

ಇಷ್ಟು ಹೇಳುತ್ತಿದ್ದಾಗ ಕೋವಿಕಾರ ಕುದುರೆ ಮೇಲೆ ಐದು ಗಾವುದ ಹೋಗಿದ್ದ ಶಿವಲಿಂಗ ಗೇಣಿಯ ನಾಗಲೋಟದಲ್ಲಿ ಓಡಿ ಅವನನ್ನು ಹಿಡಿದು ತಂದ. ಬಲ್ಲಾರಿ ಗೋಣಿಗೆ ಕೋವಿಕಾರನನ್ನು ಕೋವಿಯಿಂದ ಕೊಲ್ಲಲು ಸೂಚಿಸಿದ ಅದಕ್ಕೆ ಬಿಲ್ಲಾ ಗೋಣಿ ಹೀಗೆ ಹೇಳಿದ

೧೮. ಓಡಿ ಹೋದ ಹೇಡಿ ಅವನು ಅವನ ಮೇಲೆ ಕೈ ಮಾಡೋದಿಲ್ಲ
ನಿನ್ನ ಕೈಲಿ ನಿನ್ನ ಬುದ್ಧ್ಯಪ್ಪಾ ಶಿವಲಿಂಗ ಗೆಣಿಯಾ
ಕೋಲು.

೧೯. ಊರದೇವತೆ ಸೇವೆ ಆಗಿ ಪಟ್ಟದ ಕೋಣವನ್ನೇ ಮಾಡಿ
ಕಡಿದು ಕಡಿದು ಎಡಿಗೆ ತುಂಬಪ್ಪಾ| ಶಿವಲಿಂಗ ಗೆಣಿಯಾ
ನಿನ್ನ ಕೈಲಿ ನಿನ್ನ ಬುದ್ಧ್ಯಪ್ಪಾ
ಕೋಲು - ರ - ಕೋ - ಸಿರಿ ಗಂ ಕೋಲೆ.

ಬಲ್ಲಾರಿ ಗೋಣಿಗೆ ಕೋವಿ ಹೊಡೆತದ ನೋವು ಜಾಸ್ತಿಯಾತ್ತು. ಪರಲೋಕದ ಕಡೆಗೆ ತನ್ನಾತ್ಮವನ್ನು ನೆಲೆಗೊಳಿಸಿ ಇಹಲೋಕದ ಅಂತ್ಯ ಕ್ರಿಯೆಗೆ ಶಿವಲಿಂಗ ಗೆಣಿಯನ್ನು ಅಣಿಮಾಡಿಲು ಹೇಳಿದ.

೨೦. ಗಾಯವಾದರೂ ಸೊಕ್ಕಿ ಬಂತು ಬಾಯನಂದರೂ ತೆಗೆಯಲಾರೆ
ಸಿರಿಗಂಧದ ಸೆಕ್ಕೆ ಕಡಿದು ಅಗ್ನಿದೇವತೆ ಮಾಡಿದನ್ನ
ಅಗ್ನಿಯೊಳ್ ಒಂದಿಷ್ಟು ಇಟ್ಟು ಬಿಡಣ್ಣಾ
ಕೋಲು - ರ - ಕೋ ಸಿರಿಕೋ -

ತನ್ನ ಸೇಹಿತನ ಅಭೀಷ್ಟದ ಮೇರೆಗೆ ಶಿವಲಿಂಗ ಗೆಣಿಯ ಸಿರಿಗಂಧದ ಚಿತೆ ಮಾಡಿದ. ಅದರಲ್ಲಿ ಗೋಣಿಯ ಪಾರ್ಥಿವ ಶರೀರವನ್ನು ಇಟ್ಟು ಬೆಲೆಕೊಟ್ಟು ಬಲ್ಲಾರಿ ಗೋಣಿಯ ಬಾಕನ್ನು ತನ್ನ ನಡುವಿನಲ್ಲಿ ಸಿಕ್ಕಿಸಿಕೊಂಡು ಹೊರಟ, ಆಗ ಬಲ್ಲಾರಿ ಗೋಣಿಯ ಕತ್ತಿ ಈ ರೀತಿ ಹೇಳಿತು.

ಕಳ್ಳರ ಹಿಡಿಯುವ ಕತ್ತಿಯಲ್ಲ ಸುಳ್ಳರಿಡಿಯುವ ಕತ್ತಿಯಲ್ಲ
ಕಿಚ್ಚಿನೊಳ್ ಹಾಕಿ ಬಿಡಣ್ಣಾ ಶಿವಲಿಂಗ ಗೆಣಿಯಾ
ಕೋಲು ಕೋಲು ಕೋಲನ್ನ ಕೋಲೆ -

ಇಂಥಾ ಕತ್ತಿ ಹೋದ ಮೇಲೆ ಇಂಥ ಗೆಣಿಯ ಹೋದ ಮೇಲೆ ನಾನಿದ್ದು ಸಾರ್ಥಕವೇನಣ್ಣ. ಭೂಮಿಯ ಮೇಲೆ ನಾನಿದ್ದು ಸಾರ್ಥಕವೇನಣ್ಣ ಎಂದು ಬಲ್ಲಾರಿ ಗೋಣಿಯ ಕತ್ತಿಯೊಂದಿಗೆ ಚಿತೆಯೊಳಗೆ ಹಾರಿದ.

ಆಗ ಮೇಲೆ ಆ ಶಿವರಾಯ ಪಕ್ಕನೆ ಕಣ್ಣು ತೆರೆದು ನೋಡಿ
ಮಾಯಾದಾ ಮಳೆಗಾಳ ಸುರಿಸ್ಯಾನು ಪರಮಾತ್ಮ
ತಾನು ಮಾಯಾದ ಮಳೆಗಳ ಸುರಿದಾನು.||

**ಗೋಣ್ಯನ ಕೊಂದ ಕೋವಿಕಾರನ ಮನಪರಿವರ್ತನೆ**

ಕೋವಿಕಾರನಿಗೆ ಈ ದೃಶ್ಯ ತುಂಬಾ ಪರಿಣಾಮ ಬೀರಿತು. ಬಲ್ನಾರಿ ಗೋಣ್ಯನು ಬಗ್ಗೆ ಗೌರವ ಭಾವ ಮೂಡಿತು.

ನೀವೇ ತಾಯಿ ತಂದೆ ನೀವೇ ಬಂಧು ಬಳಗ
ನಿಮ್ಮ ಹಿಂದೆ ನಾನು ಬರುತೀನೂ ಬಲ್ನಾರಿ ಗೋಣ್ಯ
ನಿಮ್ಮ ಹಿಂದೆ ನಾನು ಬರುತ್ತೀನೂ||

ಪ್ರತ್ಯುತ್ತರವಾಗಿ ಈ ಕೆಳಕಂಡಂತೆ ಉತ್ತರವನ್ನು ಹಾಡಿನ ರೂಪದಲ್ಲಿ ಕೊಡಲಾಗಿದೆ.

ಅಂದು ಮಾತು, ಕೊಂದ ಕೊಲೆ ಎಂದು ಎಂದಿಗೂ
ತಪ್ಪದಯ್ಯ ನಮ್ಮ ಹಿಂದೆ ನೀನು ಬರಬ್ಯಾಡೋ
ಕೋವಿಗೆಳೆಯ ಬೆಳಗಿದರೊಮ್ಮೆ ಕಾಳಗ ವಿರಲಣ್ಣಾ -

ಎಂದು ಹೇಳುತ್ತಾನೆ.[೭]

**ಮರುಳು ಸಿದ್ಧಪ್ಪನ ಕಥೆ**

ಕೋಗು ಮಾರೆಣ್ಣ ಮತ್ತು ಅವನ ಹೆಂಡತಿ ಕನಕವ್ವ ಇರುತ್ತಾರೆ. ಇವರ ಮಗ ಹರಳಯ್ಯ. ಹರಳಯ್ಯ ಹುಟ್ಟಿದ ಮೇಲೆ ಕೋಗು ಮಾರೆಣ್ಣ ದಂಪತಿಗಳು ಸ್ವರ್ಗಸ್ತರಾದರು. ಮುಂದೆ ಹರಳಯ್ಯನನ್ನು ಆಲೂರಿನ ಜನರೇ ಸಲುವಿದರು. ಹರಳಯ್ಯ ಮಂದಿಯ ಕೈಯಲ್ಲಿ ಬೆಳೆಯುತ್ತಾ, ದೊಡ್ಡವನಾಗಿ ಕಟ್ಟಿಗೆ ಮಾರುತ್ತಾ ತನ್ನ ಜೀವನವನ್ನು ನಡೆಸುತ್ತಿದ್ದನು.

ಈ ರೀತಿಯಾಗಿ ಜೀವನ ಮಾಡುತ್ತಿರಲು ಇದೇ ಉಜ್ಜಿನಿ ಪಟ್ಟಣದಾಗ ಒಬ್ಬ ಬ್ರಾಹ್ಮಣರ ಮಗಳು ಮೈನೆರೆದು ಹತ್ತು ಹನ್ನೆರೆಡು ವರ್ಷಗಳಾದರೂ, ಯಾವುದೇ ವರ ಬಂದಿರಲಿಲ್ಲ. ಇದರಿಂದ ಬೇಸತ್ತ ತಂದೆ (ಬ್ರಾಹ್ಮಣ) ತನ್ನ ಆಳು ಮಗಳನ್ನೂ ಕರೆದು, ಮಗಳ ಕಣ್ಣಿಗೆ ಬಟ್ಟೆಯನ್ನು ಕಟ್ಟಿ ಅಡವಿಗೆ ಬಿಟ್ಟು ಬರುವಂತೆ ಹೇಳುತ್ತಾನೆ. ಅವರು ಕರೆದುಕೊಂಡು ಹೋಗಿ ಒಂದು ಕೊಟಾರುಕ್ಷದಂತಹ ಆಲದ ಮರ, ಅದರ ಅಡಿಗೆ ಬಾವಿ, ಆ ಮರದ ಕೆಳಗೆ ನೆಲವನ್ನು ತುಂಬಿಕೊಂಡಿದ್ದ ಎಲೆಗಳು ಇಂಥಾ ಜಾಗಕ್ಕೆ ಕರೆತಂದು ಬಿಡುತ್ತಾರೆ.

ಇತ್ತ ಬ್ರಾಹ್ಮಣನ ಮಗಳು ಶೋಕಿಸುತ್ತಾ ಕುಂತಿದ್ದಳು. ಹರಳಯ್ಯನು ಪ್ರತಿದಿನದಂತೆ. ಕಟ್ಟಿಗೆ ಹೊರೆ ಮಾಡಲು ಅದೇ ಅಡವಿಗೆ ಬಂದನು. ಅಂದು ಅವನಿಗೆ ಗಡಾನ ಕಟ್ಟಿಗೆ ಸಿಗಲಿಲ್ಲ. ಹೋಗ್ ಹೋಗೆಂದು ಹೋಗೆ ಬಿಟ್ಟ. ಹೆಣ್ಣಿನ ರೋದನೆ ಇವನಿಗೆ ಕೇಳಿಸಿತು. ಇಷ್ಟು ದಿನವಾದರೂ ಈ ಅಡವಿಯಲ್ಲಿ ಹೆಚ್ಚಿನ ಆಳುವು ಕೇಳಿಲ್ಲ. ಇದು ಯಾರಿರಬಹುದು ಎಂದು ಹರಳಯ್ಯ ಅ ಕಡೆ ನಡೆದ. ಅಲ್ಲಿ ಹೆಣ್ಣನ್ನು ಕಂಡು ಯಾರಮ್ಮ ನೀನು ಎಂದು ಕೇಳಿದ. ನಾನು ಯಾರಂತ ಕೇಳತೀಯಲ್ಲಪ್ಪಾ, ನಾನು ಉಜ್ಜಿನಿ ಗ್ರಾಮದ ಬ್ರಾಹ್ಮಣನ ಮಗಳು. ನಮ್ಮಪ್ಪ ಕಣ್ಣು ಕಟ್ಟಿ ಈ ಅಡವ್ಯಾಗ ಬಿಟ್ಟು ಹೋಗ್ಯಾನ,ನನ್ನ ಹೆಸರು

ಕಲ್ಯಾಣವ್ವ ಎಂದು ಹೇಳಿದಳು. ಹರಳಯ್ಯ ಕೇಳುತ್ತಿರುವಾಗಲೇ ನೋಡಪ್ಪ ನಾನು ನಿನ್ನ ಹೆಂಡತಿ ನೀನೇ ನನ್ನ ಗಂಡ ಎಂದಳು. ಅದಕ್ಕೊಪ್ಪಿಕೊಂಡು ಇವರಿಬ್ಬರು ಉಜ್ಜಿನಿ ಎಂಬ ಪಟ್ಟಣಕ್ಕೆ ಬಂದರು.

ಇಲ್ಲಿಯತನಕ ಹರಳಯ್ಯನದು ಒಂದೇ ಹೊಟ್ಟೆಯಿತ್ತು. ಆದರೆ ಈಗ ಎರಡು ದೇಹಗಳಾದವು. ಸಂಪಾದನೆ ಸಾಕಾಗಲಿಲ್ಲ. ಇವರು ಉಜ್ಜನಿಗೆ ಬಂದ ಮೇಲೆ, ಕೊಟ್ಟೂರು ರಸ್ತೆಯಲ್ಲಿ ಒಂದು ಜೋಪಡಿಯನ್ನು ಹಾಕಿಕೊಂಡು ಜೀವನ ನಡೆಸುತ್ತಾರೆ. ಸಂಸಾರದ ತಾಪತ್ರಯ ಕಂಡು ಹರಳಯ್ಯನ ಹೆಂಡತಿ ಕಲ್ಯಾಣವ್ವ ಗಂಡನಿಗೆ ಏನ್ರಿ ನೀವು ಒಂದು ಹೊರೆ ಕಟ್ಟಿಗೆ ತಂದದ್ದು ಯಾರಿಗೆ ಸಾಲುತ್ತೇ. ನಾನೂ ಬರುತ್ತೇನೆ. ಇಬ್ಬರೂ ಕಟ್ಟಿಗೆ ತರೋಣ ಎನ್ನುತ್ತಾಳೆ. ಆದರೆ ಹರಳಯ್ಯ ಏನೂ ಬ್ಯಾಡ ನಾನೇ ಎರಡು ಬಾರಿ ಕಟ್ಟಿಗೆ ತರುತ್ತೇನೆ ಎನ್ನುತ್ತಾನೆ. ಅದರಲ್ಲಿ ಒಂದು ಹೊರೆ ಉಪ್ಪು ಮೆಣಸಿನಕಾಯಿಗೆ, ಇನ್ನೊಂದು ಹೊರೆ ಕೂಳು ನೀರಿಗೆ ಎಂದು ಲೆಕ್ಕ ಹಾಕಿದ. ಇದನ್ನು ಕೇಳಿದ ಕಲ್ಯಾಣವ್ವ "ನೋಡ್ರಿ ಈ ರೀತಿ ಅಡವಿಗೆ ಹೋಗಿ ಕಟ್ಟಿಗೆ ತರುವುದು ಪಾಡಲ್ಲ. ನೀವು ಯಾರ ಬಳಿಗಾದರೂ ಹೋಗಿ ನಾಲ್ಕು ವರ ಸಾಲವನ್ನು ತಂದು, ಅದರಿಂದ ಚರ್ಮ ಹದಮಾಡಿ ಪಾದರಕ್ಷೆ ಮಾಡೋಣ" ಎಂದಳು. ಅದಕ್ಕೆ ಹರಳಯ್ಯ ಕಗ್ಗಲ್ಲು. ಗೌಡನ ಮನೆಗೆ ಸಾಲಕ್ಕೆ ಹೋದನು. ಹೋಗುವಾಗ ಒಂದು ಹರಕು ಕಂಬಳಿ ತೆಗೆದುಕೊಂಡು ಹೋಗಿ, ಆ ಗೌಡನ ಮನೆ ಮುಂದೆ ಕಂಬಳಿಯನ್ನು ಮುಕಳಿ ಅಡ್ಯಾಕ ಹಾಕ್ಕೊಂಡು ಮುಂಜಾನೆಯಿಂದ ಸೆಂಜಿತನಕ ಕುಂತ. ಗೌಡ ಮನೆಯಾಗ ಕೈಗೆ, ಮೈಗೆ ವಿಭೂತಿ, ದನಕರುಗಳಿಗೆ ವಿಭೂತಿ ಅದರಂತೆ ಮನೆಯ ನೂರಾವಂದು ಲಿಂಗಕ್ಕೆ ಪೂಜೆ ಮಾಡಿಕೊಂಡು ಹೊರಗಡೆ ಬಂದನು. ಚಂದು ಏನಪ್ಪಾ ಹರಳಯ್ಯ ಯಾಕ್ ಹಿಂಗ ಬಂದು ಮನೆ ಮುಂದೆ ಕುಂತಿಯಲ್ಲ ಎಂದ. ಅದಕ್ಕೆ ಹರಳಯ್ಯ ಏನಿಲ್ಲ ಗೌಡ ನಿಮ್ಮತ್ರ ನಾನು ಸಾಲ ಕೇಳಾಕ್ ಬಂದೀನಿ ಎಂದ. ಅದಕ್ಕೆ ಗೌಡ ಏಟು ಕೊಡಬೇಕಲೇ ಅಂದ್ರು. ಎಷ್ಟು ಇಲ್ರೀ ನಾಲ್ಕುವರ ಸಾಕು. ಈ ಸಾಲವನ್ನು ನನ್ನ ಮಕ್ಕಳು ಕೊಡತಾರ ನಿನ್ನ ಮಕ್ಕಳು ಪಡಕಬೇಕು ಎಂದು ಹೇಳಿದ ಹರಳಯ್ಯ. ಅದಕ್ಕೆ ಗೌಡ ಒಪ್ಪಿಕೊಂಡು ನಾಲ್ಕು ವರ ಸಾಲ ಕೊಟ್ಟು ಕಳಿವಿದನು.

ನಾಲ್ಕು ವರ ಸಾಲ ತಂದ ಹರಳಯ್ಯ ಅವದರಿಂದ ಚರ್ಮವನ್ನು ತಂದು ತಂಗಡಗೆ ಕಟಿಗೆ ತಂದು, ಅದನ್ನು ಬಿಡದು ಕರಿಮಾಡಿ ಪಾದರಕ್ಷೆ ಮಾಡಲು ಕುಳಿತ ಹರಳಯ್ಯ ಒಂದು ಮಾಡಿ ಕೊಟ್ಟಂಗೆಲ್ಲಾ, ಕಲ್ಯಾಣವ್ವ ಹೊಲಿದು ಹೊಲಿದು ಹಾಕಿದಳು. ಅದರಾಗ ಲಕ್ಷಾನುಲಕ್ಷ ಪಾದರಕ್ಷೆ ಆದವು. ಅಂತಹ ಸಮಯದಲ್ಲಿ ಉಜ್ಜಿನಿ ಹಾಗೂ ಕಾಶೀಪುರಕ್ಕೆ ಹೋಗುವ ಜನರೆಲ್ಲ ಹರಳಯ್ಯನ ಪಾದರಕ್ಷೆಯನ್ನು ನನಗೆ, ನಿನಗೆ ಎಂದು ಎಲ್ಲವನ್ನೂ ಪಡೆದುಕೊಂಡು ಹೋದರು. ಅನಂತರ ಒಬ್ಬ ಬಡವಾನು ಬಡವ ಬಂದ. ಅವನಿಗೆ ಕಾಲಿನ ತುಂಬೆಲ್ಲಾ ಬೊಬ್ಬೆಯಿದ್ದವು. ಅವನು ಹರಳಯ್ಯನನ್ನು ಒಂದು ಜತೆ ಚಪ್ಪಲಿಯಿದ್ದರೆ ಕೊಡಪ್ಪ ಎಂದು ಕೇಳಿದನು. ಹರಳಯ್ಯನು ಅವನಿಗೂ ಚಪ್ಪಲಿಕೊಟ್ಟು, ಎಲ್ಲಾ ಚಪ್ಪಲಿಯನ್ನು ಬರಿದು ಮಾಡಿಕೊಂಡು ನಿಶ್ಚಿಂತನಾದ. ಆ ಬಡವನು ಕಾಶೀಪುರಕ್ಕೆ ಹೋಗುವುದಾಗಿ ಹೇಳಿದ. ಈ ವಿಷಯ ಕೇಳಿದ ಹರಳಯ್ಯ ತನ್ನಲ್ಲಿದ್ದ ಪುಡಿಕಾಸನ್ನು ಆ ಬಡವನ ಕೈಗೆ ನೀಡಿ ಕಾಶೀಪುರದ ಸ್ವಾಮಿಗಳಿಗೆ ಕೊಡು ಎಂದು

ಹೇಳಿದನು. ಕಾಶೀಪುರಕ್ಕೆ ಹೋದಂತ ಅನೇಕ ಶ್ರೀಮಂತರು ಗಂಟು-ಗಂಟು ಹಣವನ್ನು ಸ್ವಾಮಿಗಳಿಗೆ ಕೊಡಲು ಹೋದರು. ಸ್ವಾಮಿಗಳು ಅದನ್ನು ಮುಟ್ಟಲಿಲ್ಲ. ಏಕೆಂದರೆ ಹರಳಯ್ಯನ ಹಣ ಮುಟ್ಟಿದ ಮೇಲೆಯೇ ಉಳಿದ ಎಲ್ಲರ ಭಕ್ತಿಯ ಕಾಣಿಕೆಯನ್ನು ಪಡೆದುಕೊಳ್ಳುತ್ತಿದ್ದರು. ಕಾಶೀಪುರದ ಎಂಟೆಂಟು ದಿನ ಜಾತ್ರೆ ಮಾಡುವ ಜನಕ್ಕೆ ಚಪ್ಪಲಿಯನ್ನು ಕೊಟ್ಟು ಖಾಲಿಯಾಗಿ ಕುಂತಿದ್ದ. ಅಂದು ಸಾಕ್ಷಾತ್ ಪರಶಿವನೇ ಕ್ಯಾರಣ್ಯ ಭಿಕ್ಷೆಯಿಂದ ಹರಳಯ್ಯನ ಮನೆ ಬಾಗಲಿಗೆ ಬಂದನು. ಶಿವನನ್ನು ನೋಡಿ ಕಲ್ಯಾಣವ್ವ ಮುಕ್ಕು ಮಗಿಯಲ್ಲಿ ನೀರು ತಂದು ಕಾಲಿಗೆ ಹಾಕಿ ನಮಸ್ಕರಿಸಿ, ಮುಕ್ಕು ಸ್ವಾರ್‍ಯಾಗ ಮೂರು ಕಾಳೂ ಇಲ್ಲ. ನಿಮಗೆ ಇನ್ನೇನು ದಾನ ನೀಡಿಲಿ ಎಂದು ಹಲುಬಿದಳು. ಅದಕ್ಕೆ ಪರಶಿವ ನಾನು ಭಿಕ್ಷಕ್ಕೆ ಬಂದಿಲ್ಲ, ನನಗೆ ನೀನು ಮಾಡಿದಂಥ ಒಂದು ಜೊತೆ ಚಪ್ಪಲಿಬೇಕು ಎಂದು ಕೇಳಿದ. ಶಿವಭಕ್ತ ಹರಳಯ್ಯ ಧರ್ಮ ಸಂಕಟಕ್ಕೆ ಸಿಕ್ಕುಕೊಂಡು, ದಿಕ್ಕು ತೋಚದೆ ತನ್ನ ಹೆಂಡತಿಯ ಬಲತೊಡೆಯ ಚರ್ಮ ಮತ್ತು ತನ್ನ ಎಡತೊಡೆಯ ಚರ್ಮವನ್ನು ತೆಗೆದು, ಹದಮಾಡಿ ಶಿವನಿಗೆ ಪಾದರಕ್ಷೆ ಮಾಡಿದ್ತೀನಿ ಸ್ವಾಮಿ ಎಂದು ಹೇಳಿದ. ಅದರಂತೆ ಪಾದರಕ್ಷೆಗಳನ್ನು ಮಾಡಿದನು.

ಇತ್ತ ಬ್ರಾಹ್ಮಣ ಅದೇ ಸಮಯಕ್ಕೆ ತಂಬಿಗೆ ತೆಗೆದುಕೊಂಡು ಹೊರಗಡೆ ಹೋಗಲು ಬಂದ. ಹರಳಯ್ಯ ಮಾಡಿದ ಚಪ್ಪಲಿಗಳು, ಅದೂ ತೊಡೆಯ ಚರ್ಮದಿಂದ ಮಾಡಿದಂತವು. ಇವು ಒಂದು ಮೈಲುದೂರ ಪಳಪಳ ಹೊಳೆಯುತ್ತಿದ್ದವು. ಇದನ್ನು ಕಂಡ ಬ್ರಾಹ್ಮಣ ನನಗೆ ಈ ಚಪ್ಪಲಿಗಳು ಕೊಡಲೇಬೇಕೆಂದು ಕೇಳಿದ. ಅದಕ್ಕೆ ಹರಳಯ್ಯ ಅಯ್ಯಾನವರೇ ಈ ಪಾದರಕ್ಷೆಗಳು ತಾವು ತೊಡೋವಲ್ರೀ, ಶಿವ, ಆ ಪರಮಾತ್ಮ ತೊಡುವಂತಾವ್ರೀ ಎಂದನು. ಬ್ರಾಹ್ಮಣ ಅದೇನೂ ಆಗೋದಿಲ್ಲ ನನಗೇ ಕೊಡೋ ಎಂದು, ಆ ಪಾದರಕ್ಷೆಯ ಮೇಲೆ ಕಾಲಿಟ್ಟ. ಇಟ್ಟದ್ದೇ ತಡ ಮೈಯೆಲ್ಲಾ ಉರಿಯೆದ್ದಿತು. ಮನೆಗೆ ಹೋಗಿ ಬಿದ್ದ. ಊರೆಲ್ಲರೂ ನೀರು ಸುರಿದರೂ ಆ ಬ್ರಾಹ್ಮಣನ ಉರಿಯುವ ಸಂಕಟ ಮಾತ್ರ ಕಮ್ಮಿಯಾಗಲೇ ಇಲ್ಲ.

ಆ ಬ್ರಾಹ್ಮಣನ ಇನ್ನೊಬ್ಬ ಮಗಳು ಅಂದು ಊರಿಗೆ ಬಂದಿದ್ದ ಡೊಂಬರ ನಾಟಕವನ್ನು ನೋಡುತ್ತಾ ನೀರನ್ನು ತರುವುದು ಮರೆತು ಬಿಟ್ಟಿದ್ದಳು. ಆಗ ಕತ್ತಲಾಗಿತ್ತು. ಬಾವಿಗೆ ಹೋಗಲು ದಾರಿ ಕಾಣದೇ ಅವಳು ಮಾದಿಗರ ಕೇರಿಗೆ ಬಂದು, ಅಲ್ಲಿದ್ದ ಕೆರೆ ನೀರನ್ನು ತಂದು ಅವರಪ್ಪನ ಮೇಲೆ ಸುರಿಯುತ್ತಾಳೆ. ಆ ನೀರಿನಿಂದ ಅವನ ಸಂಕಟ, ಉರಿಯು ಕಡಿಮೆಯಾಯಿತು. ಆಗ ಬ್ರಾಹ್ಮಣ ಎದ್ದು ಕುಂತು ಯವ್ವಾ ಮಗಳೇ, ಈ ನೀರನ್ನು ನೀನು ಎಲ್ಲಿ ತಂದೆ ಎಂದು ಕೇಳಿದ. ಯಪ್ಪಾ ನಾಟಕ ನೋಡ್ತಾ ನೀರು ತರೋದೆ ಮರ್‍ತಿದ್ದೆ, ಕತ್ತಲಾಗ ದಾರಿ ಕಾಣದೇ ಮಾದರಕೇರ್‍ಯಾಗಿನ ಕೆರೆಗೆಲ್ಲೆ ನೀರನ್ನೇ ತಂದು ನಿನ್ನಮ್ಯಾಲೆ ಸುರಿದೆ ಎಂದು ಹೇಳಿದಳು. ಬ್ರಾಹ್ಮಣ ನೀರನ್ನು ಕೊಂಡಾಡುತ್ತಾ ಆರಾಮಾಗಿ ಮಲಗಿದನು.

ಇತ್ತ ಹನ್ನೆರಡು ಗಂಟೆಗೆ ಬರಬೇಕಿದ್ದ ಪರಶಿವನು, ಒಂದು ಕೈಗೆ ಜೋಳಿಗೆ ಧರಿಸಿಕೊಂಡು ಹರಳಯ್ಯನ ಜೋಪಡಿ ಕಡೆ ಬಂದು, ಶಿವ ಶಿವ ಕ್ಯಾರಣ್ಯ ಭಿಕ್ಷೆ ಎಂದು ನಿಂತುಕೊಂಡ. ಹರಳಯ್ಯ ಶಿವನನ್ನು ನೋಡಿ ತಾನು ಮಾಡಿಟ್ಟ ಪಾದರಕ್ಷೆಗಳನ್ನು ತಂದು ಶಿವನ ಮುಂದಿಟ್ಟು ನಮಸ್ಕರಿಸಿದ. ನಮಗೆ

ಏನೂ ಬೇಡ, ಸಂಜೇಲಿ ಹುಟ್ಟಿ, ಮುಂಜಾನೆ ಸಾಯೋ, ಮಕ್ಕಳ ಫಲ ಕೊಡು ಎಂದು ಕಲ್ಯಾಣ್ವ ಬೇಡಿದಳು. ಅದಕ್ಕೆ ಶಿವ ತನ್ನ ಜೋಳಿಗೆಯಿಂದ ಒಂದು ಹಣ್ಣನ್ನು ಕೊಟ್ಟು ಮನೆ ಬಳಿದುಕೊಂಡು, ಮೈ-ಕೈ ತೊಳಕೊಂಡು, ಶುದ್ಧವಾಗಿರಿ. ಗಂಡ-ಹೆಂಡತಿ ಕೂಡುವಾಗ ಈ ಹಣ್ಣನ್ನು ಸೇವಿಸಿರಿ. ಅನಂತರ ಗಂಡು ಮಗನನ್ನು ಪಡೆಯುತ್ತೀರಿ. ಈ ಮಗುವನ್ನು ಪಡೆದುಕೊಂಡ ಮೇಲೆ ನೀವಿಬ್ಬರೂ ಮರಣ ಹೊಂದುತೀರಿ ಎಂದು ಹೇಳಿ ಶಿವ ಮಾಯವಾದನು.

ಮರುಳುಸಿದ್ದನ ಜನನ

ಶಿವ ಕೊಟ್ಟ ವರದಂತೆ ಕಲ್ಯಾಣವ್ವ-ಹರಳಯ್ಯನವರಿಗೆ ಗಂಡು ಮಗು ಆಯಿತು. ಈ ಗಂಡು ಹುಟ್ಟಿದ ಮೂರು ದಿವಸಕ್ಕೆ, ಕೂಸನ್ನು ನಡುವೆ ಹಾಕಿಕೊಂಡು ಜೋಪಡಿಯಲ್ಲಿ ಇಬ್ಬರು ತೀರಿಕೊಂಡರು.

ಇತ್ತ ಕಾಶೀಪುರಕ್ಕೆ ಹೋದಂತ ಜನರು ಜಾತ್ರೆಯನ್ನು ಮುಗಿಸಿಕೊಂಡು ಹಿಂದಿರುಗುವಾಗ, ಪಾಪ ಹರಳಯ್ಯ ನಮಗೆಲ್ಲ ಚಪ್ಪಲಿಯನ್ನು ನೀಡಿ ಕಾಲನ್ನು ತಂಪು ಮಾಡಿದ್ದಾನೆ. ಅವನಿಗೆ ಏನಾದರೂ ಕೊಡಬೇಕೆಂದು, ಗಂಟು-ಗಂಟು ತುಂಬ ಸಿಹಿ-ದಿನಸುಗಳನ್ನು ಹೊತ್ತು ತರುತ್ತಾರೆ. ಇಲ್ಲಿ ಹರಳಯ್ಯ ಕಲ್ಯಾಣವ್ವ ತೀರಿಹೋಗಿರುವುದು ಕಂಡು, ಮಮ್ಮಾಲ ಮರುಗಿದರು. ಎಲ್ಲರೂ ಸೇರಿ ಸುತ್ತಲಿನ ಕಟ್ಟಿಗೆ-ಕುಳ್ಳನ್ನು ತಂದು, ಇಬ್ಬರನ್ನು ಸುಟ್ಟರು. ಹರಳಯ್ಯನಿಗಾಗೆ ತಂದಂತಹ ಸಿಹಿ-ದಿನಸುಗಳನ್ನು ಊರಿಗೆ ಒಯ್ಯಬಾರದೆಂದು, ಕೂಸಿನ ಹತ್ತಿರ ಇಟ್ಟು. ಅವರವರ ಊರುಗಳಿಗೆ ಹೋದರು. ಈ ಕಡೆ ಈ ಕೂಸಿಗೆ ಪರಶಿವನೇ ಕಾಮಧೇನುವನ್ನು ಕಳಿಸಿ ಹಾಲುಣಿಸುವಂತೆ ಮಾಡಿದನು.

ಹರಳಯ್ಯನ ಮರಣದ ಸುದ್ದಿ ಕೆಲವು ದಿನಗಳಲ್ಲಿ ಸಾಲಕೊಟ್ಟಂತಹ ಕಗ್ಗಲ್ಲು ಗೌಡನಿಗೆ ಮುಟ್ಟಿತು. ಅಯ್ಯೋ ಸೂಳೇ ಮಗನೆ ಎಂದು, ಅವನ ಭೂಮಿಯನ್ನು ತಂದು ತಿಪ್ಪಿಗೆ ಹಾಕಿ, ಅವನ ಸಾಲ ತೀರಿದಂತೆಯೇ ಎಂದು ಜೋಪಾಡಿ ಹತ್ತಿರ ಬರುತ್ತಾನೆ. ಅಲ್ಲಿ ಹರಳಯ್ಯನ ಕೂಸು ಕಾಣುತ್ತದೆ. ಕೂಸನ್ನು ನೋಡಿದ ಗೌಡ, ಎಲೇ ನಿಮ್ಮಪ್ಪ ನನ್ನತ್ರ ನಾಲ್ಕು ವರ ಸಾಲ ಮಾಡಿ ಸತ್ತೇ ಹೋದ ಎಂದವನೇ ಉಗ್ಗಿನ ಬಳ್ಳಿ ಹರಿದುಕೊಂಡು, ಹರಳಯ್ಯನ ಮಗುವಿನ ಹೆಬ್ಬೆರಳಿಗೂ, ತನ್ನ ಹೆಬ್ಬೆರಳಿಗೂ ಕಟ್ಟಿಕೊಂಡು ಕಾಲಿನಿಂದ ಒದೆಯುತ್ತಾ, ತೂರಾಡುತ್ತಾ ತಂದು ತಿಪ್ಪಿಗೆ ಬೀಸಾಡುತ್ತಾನೆ. ಕಗ್ಗಲ್ಲು ಗೌಡನಿಗೆ ಮೂರು ಜನ ಹೆಂಡಂದಿರು. ಅದರಲ್ಲಿ ಸಣ್ಣವಳನ್ನು ಮನೆಯಲ್ಲಿಟ್ಟುಕೊಂಡು, ದೊಡ್ಡವಳನ್ನು ಹೊರಗೆ ಹಾಕುತ್ತಿರುತ್ತಾನೆ. ದನ ಮೇಯಿಸಿ, ನೀರು, ಸಗಣಿ ಎತ್ತುವುದು ಈಕೆಯ ಕೆಲಸ. ಒಂದು ಮಧ್ಯಾಪ್ನ ಸಗಣೆ ಹಾಕಲು ತಿಪ್ಪೆಗೆ ಬಂದಾಗ ಕೂಸಿನ ಶಬ್ದ ಕೇಳಿ ಗೌಡನ ಹಿರಿಯ ಹೆಂಡತಿ ಅಯ್ಯಾ ಯಾವ ಪಾಪಿಸೂಳೆ ಪಡೆದುಕೊಂಡು ಬಿಸಾಕಿ ಹೋಗ್ಯಾಳ ಎಂದು ಆ ಕೂಸನ್ನು ಎತ್ತಿಕೊಂಡು ಬಂದು, ಒಂದು ಕಣದ ಕುಳ್ಳಿನ ಮರೆಯಲ್ಲಿ ಬಚ್ಚಿಟ್ಟು ಬರುತ್ತಾಳೆ. ಆ ಕೂಸಿಗೆ ಒಂದು ತಿಂಗಳು ಅಂಬೋದು ಒಂದು ವರ್ಷ, ಹೀಗೆ ಐದು ತಿಂಗಳಿಗೆ ಐದು ವರ್ಷದವನಾಗಿ ಬೆಳೆಯುತ್ತಾನೆ. ಕುಳ್ಳಿನಲ್ಲಿದ್ದಾಗ ಪರಶಿವನೇ ಬಂದು ಜೇನು ಉಣಸುತ್ತಿದ್ದ. ಬೆಳೆದ ಈ ಹುಡಗ ಆ ಕಣದಲ್ಲಿಯೇ ಆಟ ಆಡುತ್ತಿರುತ್ತಾನೆ. ಗೌಡನ ಹಿರಿಯ ಹೆಂಡತಿ ಅವನನ್ನು ಮುದ್ದಿಸಿ, ತಿನ್ನಲು ಸಿಹಿಕೊಟ್ಟು, ಕುಳ್ಳಿನ ಪುಟ್ಟಿಯಲ್ಲಿ ಕೂಡಿಸಿಕೊಂಡು,

ಮೇಲೆ ಕಾಣದಂತೆ ಕುಳ್ಳಿ, ತುಂಬಿ ತಮ್ಮ ಮನೆಗೆ ಕರೆತರುತ್ತಾಳೆ.

ಮನೆಯಲ್ಲಿ ಊಟ ಮಾಡಿಸಿ ಮೈ-ಕೈ ತೊಳೆದು ಆಕೆ ಹೊರಗಡೆ ಹೋದಾಗ ಅವನನ್ನು ಒಳಗಡೆ ಬಿಟ್ಟು ಮನೆಗೆ ಬೀಗ ಹಾಕಿಕೊಂಡು ಯಾರಿಗೆ ಕಾಣದಂತೆ ಕಾಪಾಡುತ್ತಾಳೆ. ಅವನು ಮೆಲ್ಲಗೆ ೧೨ ವರ್ಷದವನಾಗಿ ಬೆಳೆಯುತ್ತಾನೆ.

**ಗೌಡನ ಆಳು ಮಗ ಮರುಳಸಿದ್ದ**

ಒಂದು ದಿನ ಕಗ್ಗಲ್ಲು ಗೌಡ ಪೂಜೆ ಮಾಡಿಕೊಂಡು ಊರ ಮುಂದಕ್ಕೆ ಹೋಗಿದ್ದ. ಆ ದಿನ ಹರಳಯ್ಯನ ಮಗ ಆಟ ಹಾಡಿಕೊಳ್ಳುತ್ತಾ ಮನೆಯ ತಲೆ ಬಾಗಲಿಗೆ ಕೂತು, ಕಾಲು, ಕೈ ಚಾಚಿಕೊಂಡು ರಾಜನಂತೆ ಕೂತಿದ್ದ. ಇದನ್ನು ನೋಡಿದ ಕಗ್ಗಲ್ಲುಗೌಡ ಅಯ್ಯೋ ಸೂಳೆ ಮಗನೆ. ನನ್ನ ೧೦೧ ಲಿಂಗವನ್ನು ಬಲೆಗೆಡಿಸಿದೆಲ್ಲಲೇ ಮಾದಿಗ ಎಂದು ನಾಲ್ಕರ ಬಾರಿ ಕೋಲು ತಂದು ಸಳ್ ಸಳ್ ಎನ್ನುವಂತೆ ಬಡಿದ. ನಮ್ಮ ಮನೆಗೆ ದನ ಕಾಯುವ ಆಳು ಆಗಿ ಇರಲೆ, ಸೂಳೆ ಮಗನೆ ಎಂದು ದನವನ್ನೇ ಕಾಯಲು ಹಚ್ಚಿದ. ಯಾಕೆಂದರೆ ಅವರಪ್ಪ ೪ ವರ ಸಾಲ ತೆಗೆದುಕೊಂಡಿದ್ದ. ಹರಳಯ್ಯನ ಮಗ ವೃತ್ತಿ ಆರಂಭಮಾಡಿದ ದಿನ ದನಗಳನ್ನು ಹೊಡೆದುಕೊಂಡು ಅಡಿವಿಗೆ ಹೋಗುವುದು, ಮರದ ನೆರಳನ್ನು ನೋಡಿ ಮಲಗಿಕೊಂಡು ಬಿಡುವುದು. ಇದನ್ನೆಲ್ಲ ನೋಡಿ ದನಕಾಯುವ ಹುಡುಗರು ಬಂದು ಕಗ್ಗಲ್ಲು ಗೌಡಗೆ ಹೋಗ್ರಿ ಗೌಡರೆ ಎಂತ ಆಳನ್ನು ಇಟ್ಟುಕೊಂಡಿರಿ, ಅವನು ದನಗಳನ್ನು ತಿರುವುದಿಲ್ಲ. ಸರಿಯಾಗಿ ಮೇಯಿಸುವುದಿಲ್ಲ, ಎಲ್ಲಾವನ್ನು ನಾವೇ ಮಾಡಬೇಕು. ಅದಕ್ಕೆ ನಾಳೆಯಿಂದ ನಾವು ಅವನನ್ನ ಕರೆದುಕೊಂಡು ಹೋಗುವುದಿಲ್ಲಾ ಎಂದು ಹೇಳಿದರು. ಇತ್ತ ಕಗ್ಗಲ್ಲು ಗೌಡನ ಕಿರಿಯ ಹೆಂಡತಿ ಆ ಹುಡುಗನಿಗೆ ಮನೆಯಲ್ಲಿ ತಿಂದು ಉಳಿದ ಹಳಸಿದ ಊಟವನ್ನು ಕೊಡುತ್ತಿದ್ದಳು. ಆದರೆ ಅವನು ತಿನ್ನುವನಂತೆ ನಟಿಸಿ ಬಾನಿಯಲ್ಲಿ ಹಾಕಿ ಹೋಗುತ್ತಿದ್ದ. ಆಗ ಗೌಡ ಆ ಹುಡುಗನನ್ನು ನೋಡಿ ಲೇ ನೀನು ದನ ಸರಿಯಾಗಿ ಕಾಯುವುದಲ್ಲವಂತಲ್ಲಾ, ಮಲಗಿಕೊಳ್ಳುವುದಕ್ಕೆ ಹೊಗ್ತಿಯೇನಲೆ ಮಾದಿಗ ಎಂದು ಬೈಯ್ಯುತ್ತಾನೆ. ಅದಕ್ಕೆ ಆ ಹುಡುಗ, ಅಲ್ಲಾ ನಮ್ಮಪ್ಪ ಎಂತ ಸಾಲ ಮಾಡಿದ್ದನು. ಈ ಸೂಳೆ ಮಗಂತಾಗ, ನನ್ನ ದಿನ ಹೊಡೆಯುತ್ತಾನಲ್ಲಾ ಎಂದು ಕಾಳಪುರದ ಕಡೆಗೆ ದನಕರುಗಳನ್ನು ಹೊಡೆದುಕೊಂಡು ಹೋದ, ಅಲ್ಲಿ ಕಾಳಪುರದ ಗೌಡನ ಹೊಲದಲ್ಲಿ ಜೋಳ ೪ ಮೂಲಿಗು ಹಟ್ಟಿ ಕಟ್ಟಿದಂಗೆ ನೆಲೆಹಾಕಿ ನಿಂತಿತ್ತು. ಅಲ್ಲಿಗೆ ಹೋಗಿ ದನಗಳನ್ನು ಬಿಟ್ಟು ಮರದ ನೆರಳು ನೋಡಿ ಮಲಿಗಿಯೇ ಬಿಟ್ಟ. ಆದರೆ ಕಗ್ಗಲ್ಲು ಗೌಡನ ದನಗಳು ಹೋಗಿ ಕಾಳಪುರದ ಗೌಡನ ಹೊಲಕ್ಕೆ ನುಗ್ಗಿ ಇದ್ದಬಿದ್ದ ಜ್ವಾಳವನ್ನ ತಿಂದು ದಂಟು ರವದಿ ಇಲ್ಲದಂಗ ಮುಗಿಸಿ ಕಾಲುಕೆದರಿ ಸಗಣಿ ಹಾಕಿ ಅಲ್ಲೆ ಮಲಿಗಿಯೇ ಬಿಟ್ಟವು. ಆದರೆ ಕಾಳಪುರದ ಗೌಡ ಹೊಲವನ್ನು ನೋಡಲು ಬರುತ್ತಾನೆ. ಹೊಲವನ್ನು ನೋಡಿ ಉಜ್ಜಿನಿ ಪಟ್ಟಣಕ್ಕೆ ಬಂದು ಕಗ್ಗಲ್ಲು ಗೌಡನ ಮನೆ ವಿಷಯ ತಿಳಿಸುತ್ತಾನೆ. ಎನಯ್ಯ ಗೌಡ ಎಂತ ಆಳನ್ನು ಇಟ್ಟುಕೊಂಡಿಯಲ್ಲಾ ೫-೬ ಖಂಡಗ ಆಗ ಜ್ವಾಳ ಏನು ಉಳಿದಿಲ್ಲ ಬಾರಯ್ಯ ಹೊಲನೋಡು ಎಂದು ಬೈದಾಡಿದ. ಅದಕ್ಕೆ ಕಗ್ಗಲ್ಲು ಗೌಡ ಊರಿನ ಹಿರಿಯರ ಜೊತೆಗೂ ಕಾಳಪುರದ ಗೌಡನ ಹೊಲಕೆ

ಆದರೆ ಆಳು ಮಗ ಎದ್ದು ಜ್ವಾಳದ ಹೊಲವನ್ನು ನೋಡಿ ದನಗಳನ್ನು ಹೊಲದಿಂದ ಹೊರಕ್ಕೆ ಹೊಡೆದುಕೊಂಡು ಬರಲು ಹೊಲದಲ್ಲಿದ್ದ ಜೋಳ ಹೇಗಿತ್ತು ಹಾಗೆ, ಮುಂಜಿನಂತೆಯೇ ಕಾಣತೊಡಗಿತು. ಕಾಳುಪುರದ ಗೌಡನ ಹೊಲ ನೋಡಲು ಕಗ್ಗಲ್ಲು ಗೌಡ ಊರಿನ ಹಿರಿಯರು ಬಂದು ನೋಡುತ್ತಾರೆ, ಎಂಗ ಇದ್ದ ಹೊಲ ಅಂಗೆ ಇರುತ್ತದೆ. ಇದನ್ನು ನೋಡಿ ಏನೆಯ್ಯ ಗೌಡ ಯಾರ ಮಾರ್ರ್ಯಾದಿ ಕಳೆಯಕಂತ ಮಾಡಿರಿ, ಯಾರ ಮಾನ ಕಳೆಯಾಕ ನಿಂತಿರಿ, ಹೊಲವೇನು ಆಗಿಲ್ಲ ಎಂದು ಗದರಿಸಿದರು. ಇತ್ತ ಉಜ್ಜಿನಿಗೆ ಬಂದರು ಆಳ ಮಗ ಮನೆಯಲ್ಲಿ ಇರುವುದನ್ನು ನೋಡಿ ಕಗ್ಗಲು ಗೌಡ ಏನಲೆ ದನಗಳನ್ನು ಗೌಡನೆ ಹೊಲಕ್ಕೆ ಯಾಕೆ ಬಿಟ್ಟಿದ್ದೆ ಎಂದ. ಅದಕ್ಕೆ ಆ ಹುಡಗ ಇಲ್ಲಪ್ಪ ನಾಯಾಕೆ ಬಿಡಲಿ ಅಲ್ಲಾಲೆ ನೀನು ಬಿಡದಿದ್ದರೆ, ಅವನ್ಯಾಕ ಸುದ್ದಿ ತಂದಿದ್ದಲೆ ಎಂದು ಗೌಡ ಹಿಡಿಕೊಂಡು ಬಡಿಯುತ್ತಾನೆ. ಅದಕ್ಕೆ ಹುಡುಗ ಅಲ್ಲ ನಮ್ಮಪ್ಪ ಎಂತ ಸಾಲ ಮಾಡಿದ್ದಾನು ಎಂಗೆ ಬಡಿತಾನಲ್ಲಾಪ್ಪ ಎಂದು ಬೈಯುತ್ತ ದಿನದಂತೆ ದನಗಳನ್ನು ಕಾಯಲು ಹೋದ.

ದನಗಳನ್ನು ಮೇಯಿಸುತ್ತಿರುವಾಗ ಹೊಲದಲ್ಲಿ ವಡ್ಡರ ಅಜ್ಜಿ, ಅಜ್ಜ ಎಳ್ಳು ಕೊಡವುತ್ತಿದ್ದರು. ಅಲ್ಲಿಗೆ ಹೋದ ಅಜ್ಜಿ, ಅಜ್ಜ ಎಂದ ಏನಪ್ಪ ಎಳ್ಳು ಕೊಡಕೆನಪ್ಪ, ಮೊಮ್ಮಗನೆ ತಿಂತಿಯಾ ಎಂದರು. ಬ್ಯಾಡ ಅಜ್ಜಿ, ಅಜ್ಜ ಆ ಎಳ್ಳು ಪುಳ್ಳಿಗಳನ್ನು ಕೊಡ್ತಿಯ ಅಯ್ಯಾ ಸ್ವಾಮಿ ತಗೊಂದು ಹೋಗುಯಪ್ಪಾ, ಅವುಗಳನ್ನು ಏನು ಮಾಡಕು ಎಂದರು. ಕೊಡವಿದ ಎಳ್ಳು ಪುಳ್ಳಿಗಳನ್ನು ಹೊತ್ತು ಹೊತ್ತು ಬೈಲಿಗೆ ಹಾಕಿ, ಎಲ್ಲಾ ದನಗಳನ್ನು ಹೊಡದುಕೊಂಡು ಬಂದು, ಪುಳ್ಳಿಗಳನೆಲ್ಲಾ ಕಡ್ಡಿಪುಡಿಯಾಗುವಂತೆ ತುಳಿಸಿದ. ಎಳ್ಳುಗಳು ಪಳ್ಳ ಪಳ್ಳ ಎಂದು ಸಿಡಿದವು. ಅವುಗಳನ್ನೆಲ್ಲಾ ಗಾಳಿಗೆ ತೂರಿ ರಾಶಿಮಾಡಿ ದನಕಾಯುವ ಹುಡುಗರನ್ನು ಕರೆದು ನೀವೂ ಹೋಗಿ ಗೌಡ್ರನ್ನ ಕರೆದುಕೊಂಡು ಬರಬೇಕು. ಅವರಿಗೆ ಹೇಳ್ರಿ ನಿಮ್ಮ ಎಲ್ಲ ಸಾಲವನ್ನು ತೀರುಸುತ್ತಾನಂತೆ. ಬರಬೇಕಾದರೆ ಊರಲ್ಲಿ ಇರುವ ಎಲ್ಲಾ ಬಂಡಿಗಳನ್ನು ಹೊಡೆದುಕೊಂಡು ಖಾಲಿ ಚೀಲಗಳನ್ನು ತೆಗೆದುಕೊಂಡು ಬರಬೇಕು ಮತ್ತೆ ಸೇರು ತಂದಾನು ಜೊತೆಗೆ ಕುರಬರ ಮನೆಗೆ ಹೋಗಿ ಡೊಳ್ಳುಗಳನ್ನು ತಗೊಂದು ಬಾ ಎನ್ರಿ. ಎಂದು ಹೇಳಿದ ದನಕಾಯುವ ಹುಡಗರು ಉಜ್ಜನಿಗೆ ಬಂದ ಗೌಡಗೆ ಹೇಳಿದರು. ಗೌಡ ಏನ್ರಲೆ ಇಂತ ಸುದ್ದಿ ಆ ಮಾದಿಗ ಎಲ್ಲಿಂದ ತಂದನಲೇ ಅಷ್ಟೊಂದು ಎಳ್ಳು ಎಂದ ಇಲ್ರಿ ಗೌಡ್ರೆ ರಾಶಿ ಮಾಡಿ ನಿಂತಸ, ಏನೆ ಇರಲಿ ಎಂದು ಕುರಬರ ಮನಿಗೆ ಹೋಗಿ ಡೊಳ್ಳನ್ನ ತಗೊಂದು ಗಾಡಿಗಳು ಹೊಡಿಸಿಕೊಂಡು ಚೀಲಗಳು ತಗೊಂದು ಬಂದು ಗೌಡ ಎಂಟಾನು ಎಂಟಿದಿನ ತುಂಬಿದರು. ಎಳ್ಳಿನ ರಾಶಿಯ ಅರ್ಧ ಸವಿಲಿಲ್ಲಾ, ಬಂಡಿಗಳು ಹೇರಿಕೊಂಡು ಹೋದೆ ಹೋಗದೆ ಆಮೇಲೆ ಆ ಹುಡಗ ಗೌಡನ್ನ ಕೇಳುತ್ತಾನೆ. ಏನ್ರಿ ಗೌಡ್ರ ನಮ್ಮಪ್ಪ ಮಾಡಿದ ಸಾಲ ತೀರಿತೇನ್ರಿ ಎಂದ ಗೌಡ ಮೂಕಸ್ಮಿತನಾಗಿ ತಲೆ ಅಲ್ಲಾಡಿಸಿ ಉಂನಪ ಸಾಲ ತೀರಿತು ಎಂದ, ಅದಕ್ಕೆ ಆ ಹುಡಗ ನಮ್ಮಪ್ಪ ಕೊಟ್ಟ ಕಾಗದ ಪತ್ರಗಳು ಇದ್ದರ ಕೊಡ್ರಿ ಎಂದ, ಇಲ್ಲಿ ತಮ್ಮ ನಿಮ್ಮಪ್ಪ ೪ ವರ ಸಾಲ ಪಡೆದುಕೊಂಡು ನನ್ನ ಮಕ್ಕಳು ಕೊಡಬೇಕು ನಿನ್ನ ಮಕ್ಕಳು ಪಡಬೇಕು

ಎಂದು ಹೇಳಿದ್ನ ಅಷ್ಟೆ ಯಾವ ಪತ್ರ ವ್ಯವಹಾರ ನಡೆದಿಲ್ಲಾ ಎಂದ, ತನ್ನ ಕೆಲಸ ಮುಗಿದ ಮ್ಯಾಲೆ ಗೌಡ ಊರಿಗೆ ಹೋದ ಉಜ್ಜಿನಿ ಎಂಬ ಪಟ್ಟಣದ ಸುತ್ತೆಲ್ಲಾ ಈ ಸುದ್ದಿ ಹಬ್ಬಿ ಎಲ್ಲಾರು ಆ ಹುಡಗನ ಪವಾಡ ನೋಡಲಿಕ್ಕೆಂದೆ ಹೋದರು. ಆ ಹುಡಗ ಎಳ್ಳಿನ ರಾಶಿ ಮ್ಯಾಲೆ ಕುತುಕೊಂಡಿದ್ದ. ಜೋತೆಗೆ ಅಲ್ಲಿದ್ದ ದೈವ ಪುರುಷರು ಹೋದರು. ಅವರಲ್ಲಿ, ಕೊಟ್ರಪ್ಪ, ಮೈಲಾರಲಿಂಗ, ವೀರಭದ್ರ, ತಿಪ್ಪೆಸ್ವಾಮಿ, ನುಂಕಿಮಲೆ ಸಿದ್ದಪ್ಪ, ಬರಿಸಿದ್ದಪ್ಪ, ಜಟಂಗಪ್ಪ ಎಲ್ಲಾರು ಹೋದರು, ಆಗ ಆ ಹುಡುಗ ಮೈಲಾರ ಲಿಂಗಪ್ಪನನ್ನು ಕರೆದು ಎ ಮೈಲಾರ ಲಿಂಗಪ್ಪ ನೀನು ಉಜ್ಜಿನಿಗೆ ಹೋಗಿ ಉಜ್ಜಿನೆಗ ಜಾಗ ಹೈತಾ ಇಲ್ಲಾ ನೋಡಿಕೊಂಡು ಬಾರಪ್ಪ ಎಂದ.

ಮೈಲಾರಲಿಂಗಪ್ಪ ಬಂದು ನೋಡಿ ಅಲೆಲೆಲೇ ಎಂದು ಉಜ್ಜಿನಿಗೆ ಜಾಗ ನನಗೆ ಐತಪ್ಪ ನಿನಗೆ ಇಲ್ಲಾ ಎಂದು ಅದನ್ನ ಕೇಳಿ ಆ ಹುಡುಗ ಮೈಲಾರಲಿಂಗಪ್ಪನ್ನ ಒಂದೇ ಸಾರಿ ಜಾಡಿಸಿ ವದ್ದರೆ ಉಜ್ಜಿನಿ ಕೆರೆ ಕೋಡಿಗೆ ಹೋಗಿ ಬಿದ್ದ. ಆಗ ಹುಡಗ ಶರಣಪ್ಪ ನೀನು ಕಾನಮಡಿಗಿಗೆ ಹೋಗಿ ಶರಣಪ್ಪ ಅನಿಸ್ಯಾಕ, ತಿಪ್ಪಣ್ಣ ನೀನು ನಾಯಕನ ಹಟ್ಟಿಗೆ ಹೋಗಿ ತಿಪ್ಪೇಸ್ವಾಮಿ ಅನಿಸ್ಯಾಕ, ವೀರಭದ್ರಪ್ಪ ನೀನು ಕೊಡೆದ ಗುಡ್ನುಕ್ಕೆ ಹೋಗಿ ಕೊಡದ ಗುಡ್ಡದ ಈರಣ್ಣ ಅನಿಸ್ಯಾಕ, ಕೊಟ್ರಪ್ಪ ನೀನು ಕೊಟ್ಟೂರುಗೆ ಹೋಗಿ ಕೊಟ್ರೇಶ ಅನಿಸ್ಯಾಕ ಬರಿಸಿದ್ದಪ್ಪ ನೀನು ಭೈರದೇವರ ಗುಡ್ಡಕ್ಕೆ ಹೋಗಿ ಬರಿಸಿದ್ದಪ್ಪ ಅನಿಸ್ಯಾಕ ಎಂದ. ಕೊನೆಗೆ ಜಟಿಗಪ್ಪನನ್ನ ಕರೆದು ಜಟಿಗೆಪ್ಪ ಉಜ್ಜಿನಿಗ ನನಗೆ ಜಾಗ ಐತಾ ಇಲ್ಲಾ ನೋಡಿಕೊಂಡು ಬಾರಪ್ಪ ಎಂದ. ಅದಕ್ಕೆ ಜಟಿಗೆಪ್ಪ ಉಜ್ಜಿನಿಗ ಜಾಗ ನಿನಗೆ ಐತಪ್ಪ ನನಗೆ ಇಲ್ಲಾ ಎಂದು ಹೇಳಿದ. ಅದಕ್ಕೆ ಆ ಹುಡಗ ಜಟಿಗಪ್ಪನ ನಿಷ್ಠೆಯನ್ನ ಮೆಚ್ಚಿ ನೊಡಪ್ಪ ಜಟಿಗಣ್ಣ ನನಗೆ ಬರೋ ಹಾಲೂ ಮಾಲು ನಿನಗೆ ಮೊದಲು ಬರಲಿ, ಎಂದು ಜಟಿಗೆಪ್ಪನ ಊರ ಕಾಯಲಿಕ್ಕೆ ಇಟ್ಟಿದ್ದಾನೆ, ಅದು ಅದಮ್ಯಾಲೆ ಗೌಡ ತನ್ನ ನೂರಒಂದು ಲಿಂಗ ಬತೆಗೆಟ್ಟುವುದ್ದಲ್ಲಾ ಅವುಗಳಿಗೆ ಶಾಂತಿ ಮಾಡಿಸಲು ಲೋಕದ ಮ್ಯಾಲೆ ಇರುವ ಎಲ್ಲಾ ಸಾಧುಸಂತರನ್ನ ಗಾಣಂಗಳನ್ನ ಕಗ್ಗಲ್ಲುಗೌಡ ಕರೆಯಿಸಿ, ಹೋಳಿಗೆ, ಉಗ್ಗಿ, ಕರ್ಜಿಕಾಯಿ, ಕರಿಗಡಬು ಅಪ್ಪಳ, ಸಂಡಿಗೆ ಎಲ್ಲಾ ತಿನಿಸುಗಳನ್ನು ಮಾಡಿಸಿ ಎಲ್ಲಾರನ್ನು ಕರೆದು ಊಟಕ್ಕೆ ಕೂಡಿಸುವ ಹೊತ್ತಿಗೆ ಒಂದು ಪವಾಡ ಪುರುಷ. ಆ ಹುಡುಗನು ಬಂದು ಊಟಕ್ಕೆ ಕುಳಿತುಕೊಂಡು ಬಿಡುತ್ತಾನೆ. ಅಯ್ಯಾ ಎಂತ ಕೆಲಸ ಮಾಡಿಬಿಟ್ಟ ಮಾದಿಗ ಬಂದು ಜಂಗಮರ ಜೊತೆಗೆ ಕೂಡುವುದ, ಎಂದು ಕಗ್ಗಲ್ಲುಗೌಡ ಅವನನ್ನ ಹೊಡೆದು ಚಂಡಿ ಒಡಿದು ಹೊರಕ್ಕೆ ತಳ್ಳಿದ ಆಹುಡುಗ ಏನೂ ಅನ್ನದೆ ಸಮ್ಮನೆ ಕೂಡ್ಲಿಗಿ ಹಾದಿ ಹಿಡಿದುಕೊಂಡು ಹೋಗುತ್ತಾನೆ. ಅದೇ ದಾರಿಯಲ್ಲಿ ವನೆತಮ್ಮ ನೋಡಿ ಅಣ್ಣ ತಡಿ ಯಣ್ಣ ಎಲ್ಲಿಗೆ ಹೊಂಟೆ ನಾನು ಬರ್ತನಿ ಎಂದಳು. ಇಬ್ಬರು ಮಾತಾಡ್ತ ಒಂದು ಆಲದ ಮರದಡಿಗೆ ಕೂತುಬಿಟ್ಟರು ಅದೇ ಸಿದ್ದನವರ್ತಿಯಾಗಿದೆ. ಇತ್ತ ಗೌಡಮನೆಯಲ್ಲಿ ಎಲ್ಲಾರೂ ಊಟಕ್ಕೆಂದು ಕುಳಿತು ಕೊಂಡರೆ ಮಾಡಿದ ಊಟವೆಲ್ಲಾ ಹುಳ ಲಿಪಿ, ಲಿಪಿ, ಎನ್ನಹತ್ತಿದವು. ಕರಿಗಡಬು ಕಪ್ಪೆ, ಕರ್ಜಿಕಾಯಿ ಮಡಗೂಬೆ, ಅನ್ನ ಹುಳ, ಸಾರು ಹುಳ ಎಲ್ಲಾ ಹುಳಗಳ ರಾಶಿಯಾಗಿ ಎಲ್ಲಾರು ಊಟಮಾಡದೇ ಎದ್ದರು. ಗೌಡಗೆ ಏನಯ್ಯ ಗೌಡ ದೊಡ್ಡ ಮನುಷ್ಯ ಅಂತ ಬಂದರೆ ನಮ್ಮನ್ನು ಹಾವು ಚೇಳು,

ಕಪ್ಪೆ ಹುಳ ತಿನ್ನಕಂತ ಕರೆಯಿಸಿದೆನಯ್ಯ ಎಂದು ಗೌಡ ನೀನು ಆ ಹುಡಗನ್ನ ಬೈದು ಕಳಿಹಿಸದ್ದೇ ತಪ್ಪಾಯಿತು. ಅವನು ಪವಾಡ ಪುರುಷನಾಗ್ಯಾನ, ಅವನನ್ನ ಎಲ್ಲಿದ್ದರೂ ಹುಡುಕಿ ಕರೆಕಳಿಯಿಸು ಎಂದರು. ಗೌಡ ಆಳು ಮಕ್ಕಳನ್ನು ಕರೆದು ಅವನು ಎಲ್ಲಿ ಹೋಗ್ಯಾನ ಹುಡುಕಿಕೊಂಡು ಕರೆದುಕೊಂಡು ಬರ್ರೆಲೇ ನನ್ನ ಮರ್ಯ್ಯಾದೆ ಉಳಿಯಂಗಿಲ್ಲಾ ಎಂದ. ಆಲದ ಮರದಡಿಗೆ ಕುಳಿತ ಅಣ್ಣಾ-ತಂಗಿ, ಅಣ್ಣಾ ಅವರು ಈಗ ನಿನ್ನ ಕರೆಯಾಕ ಬರುತಾರೆ. ನೀನು ಅಂಗ ಕರೆದು ಕೂಡಲೇ ಹೋಗಬೇಡ ಎಂಗ ಹೋಗವ್ವ ಎಂದ.

ನಮಗೆ ಆನೆ ಶೃಂಗಾರ ಮಾಡಿಕೊಂಡು ಭೂಛತ್ರಿಕೂಡಿ ಮಾಡಿಕೊಂಡು, ಅಡ್ಡಪಲ್ಲಕ್ಕಿತಗೊಂದು, ಮ್ಯಾಳ ಕಾಳಿ ತಗೊಂದು ಬಂದರೆ ನಾವು ಬರುತಿವಿ, ಅನ್ನಣ್ಣ ಅಂದ್ಲು ವನೆತವ್ವ. ಆಗ್ಲಿ ಬಿಡವ ಅವರು ಬರಲಿ ಎಂದ. ಆಳು ಮಕ್ಕಳು ಹುಡುಕೊಂತ ಬಂದ್ರು, ಬಾರಪ್ಪ ಗೌಡ್ರು ಕರೆಯಾಕೆ ಅಂತ ಕಳಿಸ್ಯಾರ ನೀನು ಬರಲೇಬೇಕಾಂತೆ ಅಂತಾರ. ಅದಕ್ಕೆ ಆ ಹುಡಗ ಗೌಡಂತಾಗ ನಂದೆನೈತಪ್ಪ ಇದ್ದ ಸಾಲನಾ ತೀರಿಸಿನಿ ಬರೋದಿಲ್ಲಾ ಅಂತನಾ. ಇಲ್ಲಾ ಬರ್ರೆಲೇ ಬೇಕಂತೆ ಅಂದಾಗ ತನ್ನ ಎಲ್ಲಾ ಷರತ್‌ಗಳನ್ನು ಹೇಳಿದಾಗ ಆನೆ ಶೃಂಗಾರ ಮಾಡಿಕೊಂಡು, ಅಡ್ಡಪಲ್ಲಕ್ಕಿತಗೊಂದು ಅದರಾಗ ಅವನ್ನ ಕುಳ್ಳಿರಿಸಿ ಕಾಳಿಮ್ಯಾಳ್ಯಾ ಭೂ ಛತ್ರಿ ಹಿಡಿಕೊಂಡು ಸಕಲ ಗೌರವದಿಂದ ಮೆರವಣಿಗೆ ಮೂಲಕ ಕರೆದುಕೊಂಡು ಬರುತ್ತಾನೆ. ಕಗ್ಗಲ್ಲು ಗೌಡನು ಮನೆಗೆ ಬಂದು ಆ ಹುಡುಗ ಊಟವನ್ನು ನೋಡಿ ಆ ಅನ್ನದ ಮೇಲೆ ಕೈ ಹಾಡಿಸುತ್ತಾನೆ. ಆಗ ಊಟದಲ್ಲಿದ್ದ ಹಾವು, ಚೇಳು, ಕಪ್ಪೆ, ಹುಳ ಮಾಯವಾಗಿ ಮಾಡಿದ ಊಟವೆಲ್ಲಾ ಘಮಘಮ ಎಂದು ವಾಸನೆ ಬರಲಿಕ್ಕೆ ಶುರವಾಗುತ್ತದೆ. ಆಗ ಎಲ್ಲಾರೂ ಊಟಮಾಡಿ ಆ ಹುಡಗನ ಮಹಿಮೆ ಪವಾಡವನ್ನ ನೆನೆಯುತ್ತ ಎದ್ದು ಹೋದರು. ಮತ್ತೆ ಪವಾಡ ಪುರುಷ ತನ್ನಲ್ಲಿದ್ದ ತಂದೆ ಸಂಪಾದಿಸಿದ ಬಂಗಾರದ ಹಿಕ್ಕಳ, ಬಂಗಾರದ ರಂಪ್ಪಗೆ, ಬಂಗಾರದ ಹುಳಿ, ಬಂಗಾರ ಹಡಿಗಲ್ಲು, ಬಂಗಾರದ ಹಂಡೇವು ಎಲ್ಲಾವನ್ನು ತಗೊಂದು ಶ್ರೀಮರುಳಸಿದ್ದನಾಗಿ ಗೋಪುರ ಕಟ್ಟಿಸಿಕೊಂಡು ತನ್ನ ಎಲ್ಲಾ ವಸ್ತುಗಳನ್ನು ಗೋಪುರದ ಮೇಲೆ ಇಟ್ಟು ಕರ್ನಾಟಕದ ಬಹು ಊರುಗಳಲ್ಲಿ ಪವಾಡಗಳನ್ನು ಮಾಡಿ ಉಜ್ಜಿನಿ ಮರುಳಸಿದ್ದನಾಗಿ ಪವಾಡ ಪುರುಷನಾಗಿ ಲೋಕಕ್ಕೆ ಬೆಳಕಾಗಿದ್ದಾನೆ. ಇವನೇ ಶ್ರೀಮರುಳುಸಿದ್ದೇಶ್ವರ, ಈ ಕಥೆಯು ಜನಪದರ ಬಾಯಿಂದ ಬಾಯಿಗೆ ಬಂದ ಕಥೆಯಾಗಿದೆ. ಇಲ್ಲಿ ಶಿಷ್ಟ ಸಾಹಿತ್ಯಕ್ಕಿಂತ ಜನಪದರ ಸಾಹಿತ್ಯದ ಆಧಾರವನ್ನು ಅವಲಂಬಿಸಿರುತ್ತದೆ.[೮]

## ಈ. ಗಾದೆ - ಒಗಟುಗಳು

ಭಾಷೆ ಮನುಷ್ಯನಿಗೆ ಒಂದು ದೊಡ್ಡ ವರ. ಭಾಷೆಯ ಮೂಲಕವೇ ಅವನು ತನ್ನ ಸಕಲ ವ್ಯವಹಾರ ಸಾಗಿಸುತ್ತಾನೆ. ಭಾಷೆಯ ಸಹಾಯವೊಂದು ಇಲ್ಲದಿದ್ದರೆ ಈ ಜಗತ್ತಿನ ಸಕಲ ವ್ಯವಹಾರ ಅಂಧಕಾರದಲ್ಲಿ ಮುಳಗುವದೆಂದು ಬಲ್ಲವರು ಹೇಳಿದ್ದಾರೆ. ಪ್ರಪಂಚದಲ್ಲಿ ಅನೇಕ ಸಾವಿರ ಭಾಷೆಗಳುಂಟು. ಜನರು ತಮ್ಮ ತಮ್ಮ ಭಾಷೆಗಳಲ್ಲಿ ತಮ್ಮ ದೈನಂದಿನ ವ್ಯವಹಾರ ಸಾಗಿಸುತ್ತಾರೆ. ಆಯಾ ಭಾಷೆಗಳ ಸೊಗಸು

ಜಾಯಮಾನಗಳನ್ನು ತಾವು ದೊಡ್ಡವರಾಗುತ್ತ ಹೋದಂತೆ ಕಲಿಯುತ್ತಾರೆ. ನಮ್ಮ ಜಾನಪದರು ಎಷ್ಟೊ ಜನ ಅನಕ್ಷರಸ್ಥರು ಆದರೂ ಅವರ ಭಾಷ ಪ್ರೌಢಮೆ ಭಾಷೆಯ ಗತ್ತು ಕಥೆಯನ್ನ ಸಾಂದರ್ಭಿಕವಾಗಿ ಹೇಳಿ ಜೀವಂತಿಕೆಯನ್ನ ತುಂಬುವುದು ನಂತರ ಮದುವೆ, ಸಮಾರಂಭಗಳಲ್ಲಿ ಅಥವ ರೈತಾಪಿ ಕೆಲಸಗಳ ಸಂದರ್ಭದಲ್ಲಿ ಕುಳಿತು ಹರಟೆ ಹೊಡೆಯುವಾಗ ಗಾದೆ, ಒಗಟುಗಳು ಹೇಳುವುದು ಕೇಳುವುದು ವಿಚಾರಿಸುವುದು ಚರ್ಚೆ ಮುಂತಾಗಿ ಈ ರೀತಿಯ ಸಂಪ್ರದಾಯ ಆಚರಣೆಗಳು ಉಜ್ಜಿನಿ ಗ್ರಾಮದಲ್ಲಿ ವಿಶಿಷ್ಟವಾಗಿ ಜನಪದರ ಬಾಯಲ್ಲಿ ಉಳಿದುಕೊಂಡಿವೆ.

ಈ ರೀತಿಯ ಗಾದೆಗಳು ಒಗಟುಗಳು ಒಂದೇ ನಾಣ್ಯದ ಎರಡು ಮಗ್ಗಲುಗಳೆಂದು ಹೇಳಬಹುದು. ಅಂದರೆ ಒಗಟು ಮತ್ತು ಗಾದೆಗಳಿಗೆ ಕೆಲವು ಅಂಶಗಳಲ್ಲಿ ತೀರ ಹತ್ತಿರದ ಸಂಬಂಧವುಂಟು. ಹೀಗಿದ್ದರೂ ಅವುಗಳಲ್ಲಿ ಸಾಮ್ಯ ವೈಷಮ್ಯಗಳುಂಟೇ ಉಂಟು ಒಗಟು ಅದೇ ಕಾಲದಲ್ಲಿ ಗಾದೆಯಂತೆಯೂ ನಡೆಯಬಲ್ಲುದು, ಆದರೆ ಗಾದೆ ಒಗಟಿನ ರೂಪ ಧರಿಸಲು ಶಕ್ಯವಿಲ್ಲಾ. ಗಾದೆಗೆ ವ್ಯಾಖ್ಯಾನ ಅಥಾವ ವಿವರಣೆ ಮುಖ್ಯವಾದದ್ದು. ಆದರೆ ಒಗಟಿಗೆ ಅದರ ಉತ್ತರ ಮಾತ್ರ ಮುಖ್ಯ. ಗಾದೆ ಅನುಭವದ ಖನಿಯಿದ್ದಂತೆ. ಆದರೆ ಒಗಟಿಗೆ ರಹಸ್ಯವಾಗಿ ಹೇಳುವ ಕ್ರೀಯೇ ಮಾತ್ರ ಮುಖ್ಯ ಗಾದೆ ವಿಶೇಷತಃ ಭಾವಕ್ಕೆ ಸಂಬಂಧಿಸಿದರೆ ಒಗಟು ಬುದ್ಧಿಗೆ ಮಾತ್ರ ಸಂಬಂಧಿಸಿದ್ದು. ಈಗ ಒಗಟು ಗಾದೆಯೂ ಆಗಬಲ್ಲದೆಂಬುದಕ್ಕೆ ಎರಡು ಉದಾಹರಣೆಗಳನ್ನು ನೋಡಬಹುದು.

ಚಿಕ್ಕಕ್ಕನಿಗೆ ಪುಕ್ಕುದ್ದ.

ಚೋಟುದ್ದ ಹುಡುಗಿಗೆ ಮಾರುದ್ದ ಜಡೆ.

ಈ ಎರಡೂ ಒಗಟುಗಳ ಉತ್ತರ ಸೌಟು ಅಥವಾ ಸೂಜಿ, ದಾರ, ಹಾಗಾದರೆ ಇವು ಗಾದೆಯೆಂದು ಎನಿಸುವುದು ಹುಡಿಕಿದರೆ ಕೆಲವು ಒಗಟುಗಳು ಗಾದೆಗಳಾಗಿಯೂ ದೊರೆಯಬಲ್ಲವು.

ಗಾದೆಗಳು

*"ಹಂಪೆಯನ್ನು ಹೊರಗೆ ನೋಡು ಉಜ್ಜಿನಿ ಒಳಗೆ ನೋಡು"*

ಎಂಬ ಗಾದೆ ಉಜ್ಜಿನಿ ಪರಿಸರದಲ್ಲಿ ಎಲ್ಲಾ ಜನಪದರು ಬಳಸುತ್ತಾರೆ ಏಕೆಂದರೆ ಹಂಪೆಯನ್ನು ಹೊರಗೆ ಸುತ್ತಿ ನೋಡಿದಾಗ ಸಿಗುವ ಎಲ್ಲಾ ಶಿಲ್ಪಕಲೆಗಳು ಧಾರ್ಮಿಕ ಕತೆಗಳು ಉಜ್ಜಿನಿಯ ಮಠದ ಒಳಗಡೆಯೂ ಕಾಣಸಿಗುತ್ತವೆ ಗೋಪುರ, ಕಮಲಸ್ತೂಪ, ಸಹಸ್ರಕಮಲ, ಬಸವಣ್ಣ, ಮುಂತಾದ ಶಿಲ್ಪಗಳು ಕುಸರಿ ಕೆಲಸಗಳು ಇತಿಹಾಸವನ್ನು ತಿಳಿಸುತ್ತವೆ. ಈ ಎಲ್ಲಾ ದೃಷ್ಟಿಯಿಂದಲೇ ಜನಪದರು ಉಜ್ಜಿನಿ ಒಳಗೆ ನೋಡು ಹಂಪೆಯನ್ನ ಹೊರಗೆ ನೋಡು ಎಂದು ಹೇಳಿರಬಹುದು, ನಂತರ

*"ತುಂಬಿದ ಕೊಡ ತುಳುಕುವುದಿಲ್ಲಾ"*

ಇದು ನಮ್ಮ ಉಜ್ಜಿನಿ ಪರಿಸರದಲ್ಲಿ ಸಣ್ಣ ಹುಡಗರಿಂದ ಮುದಕರತನಕ ಆಡುವ ಗಾದೆ. ಈ ಗಾದೆ ನಮ್ಮ ಕರ್ನಾಟಕದಲ್ಲೆ ಪ್ರಸಿದ್ಧಿ ಪಡೆದಿದ್ದರೂ ನೆರೆಯ ರಾಜ್ಯಗಳಲ್ಲಿಯೂ ಈ ಗಾದೆಯನ್ನು ಬಳಸುತ್ತಾರೆ.

ತೆಲುಗಿನಲ್ಲಿ - ನಿಂಡ ಕುಂಡ ತೊನಕದು.

ತಮಿಳುನಲ್ಲಿ - ನಿರೈಕ್ಕುಂಡೆಂ ನೀರ್ ತರುಂಬಾದು

ಮಳೆಯಾಳದಲ್ಲಿ - ನಿರಿಕ್ಕುಟಂ ತುರಿಂಬುಕ ಇಲ್ಲಾ.

ಎಂದು ಈ ರೀತಿಯಾಗಿ ತುಂಬಿದ ಕೊಡ ಅಂದರೆ ಅಪಾರವಾದ ಜ್ಞಾನವುಳ್ಳ ಮನುಷ್ಯ ಅಲ್ಪರಂತೆ ಆಡುವುದಿಲ್ಲಾ, ವಿವೇಕದಿಂದ ವರ್ತಿಸುತ್ತಾನೆ ಎಂದು ಹೇಳುವುದಕ್ಕೆ ಈ ಗಾದೆಯನ್ನು ಬಳಸುತ್ತಾರೆ.

ಇನ್ನು ಕೆಲವು ಗಾದೆಗಳನ್ನು ಈ ಕೆಲಗಿನಂತೆ ನೋಡಬಹುದು.

೧. ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆಯೇ

೨. ಹೊಟ್ಟೆಗೆ ಹಿಟ್ಟಿಲ್ಲ ಅಂದ್ರ ಜುಟ್ಟಿಗೆ ಮಲ್ಲಿಗೆ ಹೂವು

೩. ನೇವ್ಸರ ನೆಂತಿ ಬತ್ಲೆ

೪. ಕರೆ ಗಯ್ಯಾಳಿಗೆ ಹಿರಿತನ ಕೊಟ್ರೆ ಕೆರೆ ಮೇಲೆ ಹೋಗಿ ಕೇಕೆ ಹೊಡಲ್ದಂತೆ

೫. ಹುಡಿಕಾಡಿ ಮನೆಕೊಟ್ರೆ ಮ್ಯಾಲಿವೊಂದು ಹುಡುಗಿ ಕೇಳಿದ್ನಂತೆ

೬. ಉಗಾದಿತಂಕ ಬರಕೋ ಉಗಾದಿ ಆದಮ್ಯಾಲೆ ಹರಕೋ

೭. ಇದ್ದು ದ್ದು ಇದ್ದಂಗ ಹೇಳಿದರೆ ಸಿದ್ದಪ್ಪಗ ಸಿಡ್ಲಬಡಿತಂತೆ.

ಈ ರೀತಿಯ ಗಾದೆ ಮಾತುಗಳು ಉಜ್ಜಿನಿ ಜನಪದರ ಬಾಯಲ್ಲಿ ಕಾಣಿಸುತ್ತವೆ. ಈ ಎಲ್ಲಾ ಮಾತುಗಳು ಅನುಭಾವದ ವಾಣಿಗಳಾಗಿ ಮೂಡಿ ಬಂದಿವೆ.

ಒಗಟುಗಳು

ಒಗಟು ಎಂದರೆ ಒಂದು ವಸ್ತುವನ್ನು ಬೇರೊಂದು ವಸ್ತು ಅಥವಾ ವಿಷಯದೊಡನೆ ಗುಪ್ತವಾಗಿ ರಹಸ್ಯವನ್ನು ಹುಡಕಲು ಹೇಳುವ ಒಂದು ಕ್ರಮ. ಈ ಕ್ರಮ ಪ್ರಶ್ನೆ ರೂಪದಲ್ಲಿ ಇರುತ್ತದೆ. ಒಗಟಿನಲ್ಲಿ ಎರಡು ಸದೃಶ ವಸ್ತುಗಳಿರಬೇಕು. ಒಂದು ಉಪಮಾನ, ಇನ್ನೊಂದು ಉಪಮೇಯ. ಒಗಟಿನಲ್ಲಿ ಉಪಮಾನ ವಾಚ್ಯವಾಗಿರುತ್ತದೆ. ಉಪಮೇಯ ಅಸ್ಪಷ್ಟವಾಗಿ ರಹಸ್ಯವಾಗಿರುತ್ತದೆ. ಉಪಮಾನದ ಆಧಾರದಿಂದ ಉಪಮೇಯವನ್ನು ಹುಡಕಬೇಕಾಗುತ್ತದೆ. ಆದ್ದರಿಂದ ಒಗಟು ಬುದ್ಧಿ ಶಕ್ತಿಯ ಪರೀಕ್ಷೆಗೆ ಒಂದು ಒಳ್ಳೆಯ ಒರೆಗಲ್ಲು. ಇಂತಹ ಒಗಟುಗಳು ಜನಪದರ ಒಂದು ಉತ್ತಮ ಸಾಹಿತ್ಯಗಳಾಗಿ ಉಳಿದುಕೊಂಡು ಬಂದಿವೆ. ಇಂತಹ ಒಗಟುಗಳು ಉಜ್ಜಿನಿ ಗ್ರಾಮದಲ್ಲಿಯೂ ಜನಜನಿತವಾಗಿವೆ.

ಬಂಗಾರದ ಮೇಜು ಬೆಳ್ಳಿಟಾಕು<br>
ಮಠದಾಗ ಕುತಕೊಂಡು ಆಶೀರ್ವಾದ ಮಾಡ್ತಾರೆ<br>
ಉಜ್ಜನಿ ಗುರುಗಳು

ಜನಪದರೂ ಗುರುಗಳನ್ನ ಮಠವನ್ನ ನೋಡಿ ಅವರ ಮೇಲೆಯೇ ಒಗಟನ್ನು ಕಟ್ಟಿ ಹೇಳುವಲ್ಲಿ ಗೌರವದ ಹಿನ್ನಲೆಯಲ್ಲಿ ಈ ಒಗಟು ಹುಟ್ಟಿ ಕೊಂಡಿದೆ.

ದನ ಕಾದನಾ ಆಳಾಗಿ ದುಡದಾನ

ದೇಸಕ್ಕಾ ಅರಸನಾಗಿ ಮೆರುದು

ಗುಡಿಯ್ಯಾಗ ಕುಂತಾನ ಸಿದ್ದ ಪ್ಪ

ಈ ಒಗಟು ಶ್ರೀ ಮರಳುಸಿದ್ದೇಶ್ವನ ಜೀವನ ವೃತ್ತಾಂತವನ್ನು ಸಾರುತ್ತದೆ.

ಅಕ್ಕಿ ನುಚ್ಚು ಬೆಳ್ಳಿಕುಚ್ಚು

ಸೂಳೇರ ಮ್ಯಾಲೆ ಬಲು ಹುಚ್ಚು

ನಾಗಪ್ಪ ಧಣಿಯರು.

ಎಂದು ಗಂಡನ ಗುಣಗಳನ್ನ ಅರಿತ ಹೆಂಡತಿ ಒಗಟಿನ ರೂಪದಲ್ಲಿ ಹೇಳುತ್ತಾಳೆ.'

## ಉ. ನಂಬಿಕೆ

### ಮಳೆಗಾಗಿ ದಂಡೆಯಾತ್ರೆ

ಉಜ್ಜಿನಿ ಇತಿಹಾಸ ಎಷ್ಟು ರೋಚಕವೋ ಊರಿನೊಳಗಿನ ಜನಪದರ ಆಚರಣೆ, ಸಂಪ್ರದಾಯ ಪದ್ಧತಿಗಳೂ ಅಷ್ಟೇ ಕುತೂಹಲ ಮೂಡಿಸುತ್ತವೆ. ಭರತ ಹುಣ್ಣಿಮೆಯ ದಂಡೆಯಾತ್ರೆ, ಮಳೆ ಬೇಗ ತರಲು ಬೀಜಯಾತ್ರೆಯು ಇಂದಿಗೂ ಜನಪದರ ಭಕ್ತಿಯ ಜನಾಕರ್ಷಣೆಗೆ ದ್ಯೋತಕವಾಗಿದೆ.

'ಮಳೆಬೀಗ' ತರುವ ಸಂಪ್ರದಾಯ ಉಜ್ಜಿನಿಯಲ್ಲಿ ಜರುಗತ್ತದೆ. ಇದೊಂದ ವಿಶಿಷ್ಟವಾದ ಪದ್ಧತಿ. ಒಂಭತ್ತು ಜನ ಆಯಗಾರರು, ಬುತ್ತಿಗಂಟು ಹೆಗಲಿಗೊಂದು ಕಂಬಳಿ, ಕೈಯಲೊಂದು ಬೆತ್ತ ಓಡದು ಕುಳಿತುಕೊಳ್ಳುತ್ತಾರೆ. ಇವರಿಗೆ ಮಳೆ ಬೀಗ ತರುವ ಕಾತರ ಐದು ವರ್ಷಕ್ಕೊಮ್ಮೆ ಮಳೆ ಬೀಗ ತರುವವರನ್ನು ಬೀಳ್ಕೊಡಲು ಉಜ್ಜಿನಿ ಪೀಠದ ಜನಪದರು ಸಿದ್ಧವಾಗಿ ನಿಂತಿರುತ್ತಾರೆ.

ಮಳೆಬೀಗ ಇರುವುದು ಉಜ್ಜಿನಿಯಲ್ಲಿಲ್ಲ. ಇಲ್ಲಿಂದ ಸುಮಾರು ನೂರು ಕಿ.ಮೀ. ದೂರದ ಸಂದೋಗಿ (ಕೊಪ್ಪಳ ಜಿಲ್ಲೆ)ಯಲ್ಲಿ, ಅಯಗಾರರಲ್ಲಿ ವರ್ಣಭೇದವಿಲ್ಲ. ಇವರಲ್ಲಿ ಮಡಿವಾಳರು, ನಾಯಕರು, ಕುರುಬರು, ಕೊರವರು ಇರುತ್ತಾರೆ. ಇಲ್ಲಿ ಮಾನವರೆಲ್ಲ ಒಂದೇ ಎಂಬ ತತ್ವ, ಗುಂಡಿನ ಪ್ರಮುಖನಿಗೆ ವಿಭೂತಿ ಹುಂಡಿಗಳನ್ನು ಅರ್ಪಿಸುತ್ತಾರೆ. ಪವಿತ್ರವಾದ ಕರಿಶಿಖರದ ಮೇಣದ ಉಂಡಿ ಕೊಡಲಾಗುತ್ತದೆ. ನಂತರ ಅಚ್ಚ ಹೊಸ ಕರಿಕಂಬಳಿ ನೀಡಲಾಗುತ್ತದೆ. ಅಯಗಾರರಿಗೆ ಶ್ರೀ ಪೀಠ ಮತ್ತು ಗ್ರಾಮಸ್ಥರು ಕೆಲ ಷರತ್ತುಗಳನ್ನು ವಿಧಿಸಿರುತ್ತಾರೆ. ಇದು ನಿಷ್ಠೆಯಿಂದ ಜರುಗುವ ಪಾದಯಾತ್ರೆ, ಯಾರೂ ಚಪ್ಪಲಿ ಮೆಟ್ಟಬಾರದು. ಯಾವ ಕಾರಣಕ್ಕೂ ಗ್ರಾಮದ ಮಧ್ಯೆ ಹಾಯುವಂತಿಲ್ಲ. ಪರರ ಸಂಗಡ

ಮಾತನಾಡುವಂತಿಲ್ಲ. ಅವರವರ ಮಧ್ಯದಲ್ಲಿ ಮಾತ್ರ ಸಂಭಾಷಣೆ ನಡೆಸಬಹುದು. ಮಾರ್ಗ ಮಧ್ಯದಲ್ಲಿ ಇವರಿಗೆ ತೊಂದರೆಯಾಗಬಾರದೆಂದು ಶ್ರೀ ಪೀಠದಿಂದ ಪತ್ರ ಬರೆದು ಕೊಟ್ಟಿರುತ್ತಾರೆ. ಈ ಪತ್ರದೊಂದಿಗೆ ಊರ ಗ್ರಾಮಪಂಚಾಯತಿ ಮತ್ತು ಪೋಲೀಸ್ ಠಾಣೆ, ತಹಶೀಲ್ದಾರರು ಕೊಟ್ಟ ಪತ್ರಗಳು ಇರುತ್ತವೆ. ಪೂರ್ವಕಾಲದಿಂದಲೂ ನಡೆದುಬಂದ 'ಮಳೆಬೀಗ' ತರುವ ಪದ್ಧತಿ ಗೊತ್ತಿರುವುದರಿಂದ ಇವರನ್ನು ಕಂಡೊಡನೆ ಪೂಜ್ಯ ಭಾವನೆಯಿಂದ ದಾರಿಬಿಟ್ಟು ಸರಿಯುತ್ತಾರೆ.

ಶ್ರೀ ಪೀಠದಿಂದ ಶನಿವಾರವೇ ಹೊರಡಬೇಕೆಂಬ ಪದ್ಧತಿ, ಭಾನುವಾರ ರಾತ್ರಿ ಮಳೆಬೀಗ ತರುವ ತಂಡ ಸಿಂದೋಗಿ ತಲುಪುತ್ತಾರೆ. ಗ್ರಾಮಸ್ಥರು ಸ್ವಾಗತಿಸಿ ಮೆರವಣಿಗೆಯಲ್ಲಿ ಮರುಳಸಿದ್ದಪ್ಪನ ಗುಡಿಗೆ ಕರೆತರುತ್ತಾರೆ. ಇಲ್ಲಿ ಉಜ್ಜಿನಿ ಸದ್ಧರ್ಮ ಪೀಠದ ಶಾಖಾಮಠ ಇಲ್ಲಿದೆ. ಮಳೆ ಮಲ್ಲಿಕಾರ್ಜುನ ಜಗದ್ಗುರುಗಳ ಗದ್ದುಗೆ ಇದೆ. ನೂರಾರು ವರ್ಷಗಳ ಹಿಂದೆ ಪೂಜ್ಯರು ಉಜ್ಜಿನಿ ಪೀಠದ ಜಗದ್ಗುರುಗಳಾಗಿದ್ದವರು. ವೀರಶೈವ ಧರ್ಮಪ್ರಚಾರ ಕೈಗೊಂಡು ಶ್ರೀಗಳವರು ಸಂಚರಿಸುತ್ತಾ ಸಿಂದೋಗಿಗೆ ಬಂದರಂತೆ ಶ್ರೀಗಳವರು ಸಿಂದೋಗಿಯಿಂದ ಮರಳುವಾಗ ಮಳೆಬೀಗವನ್ನು ಮರೆತು ಬಂದರು ಎಂಬ ನಂಬಿಕೆ ಉಜ್ಜಿನಿ ಗ್ರಾಮಸ್ಥರದು. ಈ ಘಟನೆ ನಡೆದು ಶತಮಾನಗಳು ಉರುಳಿವೆ. ಅಂದಿನಿಂದಲೂ ಐದು ವರ್ಷಕ್ಕೊಮ್ಮೆ ಮಳೆಬೀಗ ತರುವ ಸಂಪ್ರದಾಯ ನಡೆಯುತ್ತಾ ಬಂದಿದೆ. ಇಲ್ಲಿಂದ ಒಯ್ದಿದ್ದ ಕಂಬಳಿ ಮತ್ತು ವಿಭೂತಿಗಳನ್ನು ಅಲ್ಲಿ ಅರ್ಪಿಸುತ್ತಾರೆ. ಸೇರು ಜೋಳದ ಬೀಜ ಅದಲಿ ಬದಲಿಯಾಗುತ್ತವೆ.

ಸಿಂದೋಗಿಯನ್ನು ಆಯಗಾರರು ಸೋಮವಾರ ಬಿಟ್ಟು ಮಂಗಳವಾರ ರಾತ್ರಿ ಉಜ್ಜಿನಿ ತಲುಪುತ್ತಾರೆ. ಇವರನ್ನು ಜನಪದರು ಆಧರಿಸಿ ಸ್ವಾಗತಿಸುತ್ತಾರೆ. ವರುಣದೇವನ ಪ್ರತಿನಿಧಿಗಳಂತೆ ಆಯಗಾರರು ಗ್ರಾಮವನ್ನು ಪ್ರವೇಶಿಸುತ್ತಾರೆ. ಮರುದಿನ ರೈತರು ಮನೆಯಿಂದ ಸೇರು, ಎರಡು ಸೇರು ಜೋಳ ತೆಗೆದುಕೊಂಡು ಶ್ರೀ ಪೀಠಕ್ಕೆ ಧಾವಿಸುತ್ತಾರೆ. ಸಿಂಧೋಗಿಯಿಂದ ತಂದ ಜೋಳವನ್ನು ಮನೆಗೆ ತಂದು ಮನೆಯ ಜೋಳದಲ್ಲಿ ಮಿಶ್ರ ಮಾಡಿಬಿಡುತ್ತಾರೆ. ಹೀಗೆ ಜೋಳದ ಬದಲಾವಣೆಯಿಂದ ಉತ್ತಮ ಬೆಳೆ, ಸಕಾಲಕ್ಕೆ ಬೆಳೆ, ಅಧಿಕ ಇಳುವರಿ ಬರುತ್ತದೆ ಎಂಬುದು ಜನಪದರ ಆಚರಣೆ, ನಂಬಿಕೆ ಅರ್ಥಗರ್ಭಿತವಾಗಿದ್ದು ಇಂದಿಗೂ ಸಂಪ್ರದಾಯವಾಗಿ ಉಜ್ಜಿನಿ ಗ್ರಾಮದಲ್ಲಿ ಉಳಿದಿದೆ. (ಕನ್ನಡ ಪ್ರಭ ವರದಿಯಿಂದ ದಿ. ೨೮, ಶನಿವಾರ ಏಪ್ರಿಲ್ ೨೦೦೧)

**ಅಡಿಟಿಪ್ಪಣಿಗಳು**

೧. ಉಜ್ಜಿನಿ ನಾಮದ ಕಥೆಯನ್ನು ಹೇಳಿದವರು ಎಸ್.ಎಂ. ನಾಗಭೂಷಣ ಕನ್ನಡಪ್ರಭ ವರದಿಗಾರರು, ಮತ್ತು ಉಜ್ಜಿನಿ ಜನಪದರು.

೨. ಪಂಚವಣ್ಣಿಗೆಯ ನಂದೀಶ ಶಿವಕವಿ ವಿರಚಿತ ಶ್ರೀ ಜಗದ್ಗುರು ಮರಾಳಾರಾಧ್ಯ ವಿಜಯವೆಂಬ ಕಾವ್ಯದ ಗದ್ಯಾನುವಾದ ರೂಪವಾದ ಪಂ|| ಕವಲಿ ಚನ್ನಬಸಪ್ಪವೇ|| ಮಠದ ಮರಿದೇವ ಸ್ವಾಮಿಗಳಿಂದ

ಸಂಪಾದಿತವಾದ ೧೯೪೯ರಲ್ಲಿ ಪ್ರಕಟವಾದ ಶ್ರೀ ಮರುಳ ಸಿದ್ಧಾಂತ ಆಧಾರದಿಂದ ರಚಿತವಾದ ಪಂಚಪೀಠಗಳ ಪರಂಪರೆ ಪುಸ್ತಕದಿಂದ ತೆಗೆದುಕೊಳ್ಳಲಾಗಿದೆ.

೩. ಈ ಜಗದ್ಗುರುಗಳ ಪರಂಪರೆಯನ್ನು ಹಿರೇಹಡಗಲಿ ಪುರಾಣಿಕ ಮಠದ ವೇ. ಪಂ. ವಿರೂಪಾಕ್ಷ ಶಾಸ್ತ್ರಿಗಳಿಂದ ರಚಿತವಾದ ಉಜ್ಜಯಿನಿ ಜಗದ್ಗುರು ಶ್ರೀ ಸಿದ್ಧಲಿಂಗೇಶ ವಿಜಯ ೧೯೪೪ನೇ ಇಸವಿದು ಪುಸ್ತಕದಿಂದ ತೆಗೆದುಕೊಳ್ಳಲಾಗಿದೆ.

೪. ಸಂಶೋಧಕರ 'ಕುಂಬಾಸ' ಅವರ 'ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ' ಸಂಶೋಧಿತ ಲೇಖನಗಳಿಂದ ತಿಳಿಯುತ್ತದೆ.

೫. ವರದಿಗಾರರು, ಕನ್ನಡ ಪ್ರಭ, ನಾಗಭೂಷಣ ಇವರ ಅಭಿಪ್ರಾಯ ಮತ್ತು ೪ನೇ ಶಾಸನದ ಕುಂ.ಬಾ. ಸದಾಶಿವಪ್ಪನವರ ಅಭಿಪ್ರಾಯ.

೬. ಸದ್ಧರ್ಮ ಸಮೀಕ್ಷೆಯಿಂದ ಮತ್ತು ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಉಜ್ಜಿನಿಯ ಹರಿಜನ ಬೆಲ್ಲಾರ ಚಂದ್ರಪ್ಪನವರಿಂದ ಸಂಗ್ರಹಿಸಿದ್ದು.

೭. ಈ ಮೇಲಿನ ಕೋಲು ಪದಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಲಾಗಿದೆ. ಮತ್ತು ಸಿಂ.ಎಂ. ವೀರಭದ್ರಯ್ಯನವರ ಸದ್ದಮ್ಮ ಸಮೀಕ್ಷೆ ಪುಸ್ತಕದಿಂದಲೂ ತಿಳಿದಿಕೊಂಡು ಬಳಸಿ ಕೊಳ್ಳಲಾಗಿದೆ. ಮತ್ತು ಮಾರೆಪ್ಪ, ಗುರಪ್ಪ ಅವರು ಇವೆತ್ತಿಗೂ ಈ ಹಾಡುಗಳನ್ನು ತಾಸುಗಟ್ಟಲೇ ಹಾಡುತ್ತಾರೆ.

೮. ಈ ಕಥೆಯನ್ನು ಉಜ್ಜಿನಿ ಗ್ರಾಮದ ಹಳೆ ತಲೆಮಾರಿನ ಕಥೆಗಾರ್ತಿ ಹರಿಜನದ ದೊಮ್ಮಟಿ ಕೆಂಚಮ್ಮನವರಿಂದ ಕ್ಷೇತ್ರ ಕಾರ್ಯದಲ್ಲಿ ತಿಳಿದುಬಂದದ್ದು.

೯. ಈ ಗಾದೆ ಒಗಟುಗಳನ್ನು ಉಜ್ಜಿನಿಯ ಜನಪದರಿಂದ ಸಂಗ್ರಹಿಸಲಾಗಿದೆ.

ದೇವಸ್ಥಾನದ ಪ್ರವೇಶ ದ್ವಾರದಲ್ಲಿ ಕತ್ತೆತ್ತಿ ನೋಡಿದರೆ ಗಂಟೆ ಕಾಣುತ್ತದೆ. ಮತ್ತು ಹರಪನಹಳ್ಳಿ ಪಾಳೆಯಗಾರರ ಆಳ್ವಿಕೆಯಲ್ಲಿ ಉಜ್ಜಿನಿಗೆ ತುಂಬ ಗೌರವದ ಸ್ಥಾನಗಳಿದ್ದು, ಉಜ್ಜಿನಿಯ ಬಗ್ಗೆ ಅಪಾರ ಪ್ರೀತಿವುಳ್ಳ ದೊರೆಗಳಾಗಿದ್ದರು ಎಂಬುದು ಇತಿಹಾಸದಿಂದ ತಿಳಿಯುತ್ತದೆ.

**ಉಜ್ಜಿನಿಯಲ್ಲಿ ಮುಕ್ತಿ ಹೊಂದಿದ ಕೆಳದಿರಾಣಿ ವೀರಮ್ಮಾಜಿ**

ಕನ್ನಡ ನಾಡುಕಂಡ ಮಹಿಳೆಯರಲ್ಲಿ ಕೆಳದಿಯ ವೀರರಾಣಿ ವೀರಮ್ಮಾಜಿ, ಕೂಡ ಒಬ್ಬಳು. ಈಕೆ ಮಹಿಳೆ ಎಂಬ ಕಾರಣಕ್ಕಾಗಿ ಆಗಾಗ ಹೈದರಾಲಿ ಯುದ್ಧ ಸಾರುತ್ತಿದ್ದ. ಚಾಣಾಕ್ಷಮತಿ ಬುದ್ಧಿವಂತಳಾದ ವೀರಮ್ಮಾಜಿ ತನ್ನ ಸಂಘಟನಾ ಸಾಮರ್ಥ್ಯದಿಂದ ಸೈನ್ಯವನ್ನು ಒಗ್ಗೂಡಿಸಿ ಹೋರಾಡಿ ಹೈದರಾಲಿಯ ಅಗಾಧವಾದ ಸೈನ್ಯವನ್ನು ಹಿಮ್ಮೆಟ್ಟಿಸುತ್ತಿದ್ದಳು. ಆದರೆ ಹೈದರಾಲಿಯ ಕುತಂತ್ರದ ಮುಂದೆ ತನ್ನ ಸೋಲನ್ನು ಕ್ರಿ.ಶ. ೧೭೩೮ರಲ್ಲಿ ಒಪ್ಪಿಕೊಳ್ಳಬೇಕಾಯಿತು. ಹೈದರಾಲಿಯು ತನ್ನ ಶತ್ರುವಾದ ವೀರಮ್ಮಾಜಿಯನ್ನು ಮಧುಗಿರಿ ಕೋಟೆಯಲ್ಲಿ ಬಂಧಿಸಿಟ್ಟ, ಸೆರೆಮನೆಯಲ್ಲಿದ್ದ ವೀರಮ್ಮಾಜಿ ಗುಪ್ತವಾಗಿ ಮರಾಠರೊಂದಿಗೆ ಸ್ನೇಹ ಬೆಳೆಸಿದಳು. ಮರಾಠ ಸೈನ್ಯವು ಮಧುಗಿರಿ ಕೋಟೆಯನ್ನು ಮುತ್ತಿಗೆ ಹಾಕಿ, ವೀರಮ್ಮಾಜಿ ಮತ್ತು ಆಕೆಯ ದತ್ತು ಪುತ್ರ ೩ನೇ ಸೋಮಶೇಖರನನ್ನು ಬಿಡಿಸಿಕೊಂಡು ಪುಣೆಗೆ ಕರೆದೊಯ್ಯುವಾಗ, ದಾರಿ ಮಧ್ಯದಲ್ಲಿ ವೀರಶೈವಳಾದ ವೀರಮ್ಮಾಜಿ ತನ್ನ ಧರ್ಮ ಗುರುಗಳ ಹತ್ತಿರ ತನ್ನ ಸಂಕಷ್ಟವನ್ನು ನಿವೇದಿಸಿಕೊಂಡು ವೀರಮ್ಮಾಜಿ ಗುಪ್ತವಾಗಿ ತನ್ನ ಲಿಂಗವನ್ನು ನುಂಗಿ, ಆತ್ಮಹತ್ಯೆ ಮಾಡಿಕೊಂಡಳು ಎಂದು ಇತಿಹಾಸದಿಂದ ತಿಳಿಯುತ್ತದೆ.

ಇಂದಿಗೂ ವೀರಮ್ಮಾಜಿ ಸಮಾಧಿಯನ್ನು ಉಜ್ಜಿನಿಯ ಸಾಂತನಹಳ್ಳಿ ಕೊಡದಪ್ಪನವರ ಮನೆ ಆವರಣದಲ್ಲಿ ಕಾಣಬಹುದು. ರಾಣಿಯ ಸಮಾಧಿಯ ಮೇಲೆ ನಂದಿ ಹಾಗೂ ದತ್ತು ಪುತ್ರರ ಹುಬ್ಬು ಶಿಲ್ಪಗಳು ಕೆಳದಿಯ ಉಳಿದ ರಾಜರ ಸಮಾಧಿಯ ಲಕ್ಷಣ ಹೋಲುತ್ತದೆ. ಇದರ ಜೊತೆಯಲ್ಲಿರುವುದು ಸಮಾಧಿ ಎಂಬುದನ್ನು ಸ್ಪಷ್ಟೀಕರಿಸುತ್ತದೆ. ಉಜ್ಜಿನಿ ಪೀಠಕ್ಕೂ ಕೆಳದಿ ಸಂಸ್ಥಾನಕ್ಕೂ ನಿಕಟ ಬಾಂದವ್ಯವಿರುವುದನ್ನು ಸಮಾಧಿ ಮತ್ತು ಈ ಶಾಸನ ಸ್ಪಷ್ಟೀಕರಿಸುತ್ತವೆ.

## ಆ. ಪುರಾಣ ಐತಿಹ್ಯ

ಹಲವಾರು ಹಳ್ಳಿಯ ಜನರು ಪುರಾಣದ ಅನೇಕ ಸಂದರ್ಭಗಳು ತಮ್ಮೂರಲ್ಲಿ ಆಗಿ ಹೋಗಿವೆ ಎಂದು ಹೇಳಿಕೊಳ್ಳುವಂತೆ ಉಜ್ಜಿನಿ ಜನರೂ ಕೂಡ ಅಂಥವನ್ನೆ ನಮ್ಮ ಊರಲ್ಲಿ ನೆಡಿದು ಹೋಗಿವೆ ಎಂದು ಹೇಳಿಕೊಂಡು ಅಭಿಮಾನ ಪಡುತ್ತಾರೆ.

**೧. ವಟವೃಕ್ಷ ಅಥವಾ ಸಿದ್ದವರ್ತಿ**

ಮರುಳುಸಿದ್ದೇಶ್ವರ ಸ್ವಾಮಿಗಳು ದೇಶ ಸಂಚಾರ ಮಾಡುತ್ತಾ ಇರುವಾಗ, ಭಕ್ತರೊಂದಿಗೆ ಉತ್ತರ ಪ್ರದೇಶದ ಕಡೆಯಿಂದ ಬಂದು ಉಜ್ಜಿನಿಗೆ ಹತ್ತಿರದಲ್ಲಿರುವ ಒಂದು ಆಲದ ಮರದ ನೆರಳಿನಲ್ಲಿ ವಿಶ್ರಾಂತಿ

ಪಡೆದು, ನಂತರ ಅವರು ಲಿಂಗಪೂಜೆಗೆ ನೀರು ಬೇಕಾದ್ದರಿಂದ ಸ್ವಾಮಿಗಳು ಅಲ್ಲಿಯೇ ಒಂದು "ನೀರಿನ ವರ್ತಿಯನ್ನು" ತೆಗೆದರು. ನಂತರ ತಮ್ಮ ಪೂಜಾ ಸೇವೆಯನ್ನು ಮುಗಿಸಿಕೊಂಡರೆಂಬ ಐತಿಹ್ಯದ ಕಾರಣ. ಈ ನೀರಿನ ವರ್ತಿಯನ್ನು ಇಂದಿಗೂ ಸಹ ನೋಡಬಹುದು. ಇದಕ್ಕೆ ಉಜ್ಜಿನಿ ಜನರು "ಸಿದ್ದನವರ್ತಿ ವೆಂದು ಅಥವಾ ವಟವೃಕ್ಷ"ವೆಂದೂ ಕರೆಯುತ್ತಾರೆ. ಎಂದು ಉಜ್ಜಿನಿ ದೊಡ್ಡಬಸಪ್ಪ ಹೇಳುತ್ತಾರೆ

೨. ಜಟ್ಟಿಲಿಂಗೇಶ್ವರ ಗುಡಿ

ಈ ಗುಡಿಯ ಮರುಳಸಿದ್ದೇಶ್ವರ ಸ್ವಾಮಿಯ ಗುಡಿ ಹಿಂದಕ್ಕೆ ಅಂದರೆ ದಕ್ಷಿಣ ದಿಕ್ಕಿನ ಕಡೆಗೆ ಉತ್ತಾರಾಭಿಮುಖವಾಗಿದೆ. ಈ ಗುಡಿಯಲ್ಲಿ ಒಂಬತ್ತು ಚಪ್ಪಟೆಯಾದ ಶಿಲಾವಿಗ್ರಹಗಳು ಒಂದೇ ಸಾಲಿನಲ್ಲಿವೆ. ಈ ಊರಿನ ತಳವಾರ ವಂಶಸ್ಥರು ಈ ವಿಗ್ರಹಗಳಿಗೆ ಪೂಜಾ ಸೇವಕರಾಗಿರುತ್ತಾರೆ. ಮರುಳಸಿದ್ದೇಶ್ವರ ಗುಡಿಗೆ ಪೂಜೆಗಾಗಿ ಹೋಗುವ ಭಕ್ತರು ಮೊದಲು ಜಟ್ಟಿಲಿಂಗೇಶ್ವರ ಗುಡಿಗೆ ಹೋಗಿ ಪೂಜೆ ಸಲ್ಲಿಸುತ್ತಾರೆ. ಇಂದಿಗೂ ಸಹ ಉಜ್ಜಿನಿಯಲ್ಲಿ ಎಲ್ಲಾ ಜನಾಂಗದವರು ಮೊದಲು ಜಟ್ಟಿಲಿಂಗೇಶ್ವರ ಸ್ವಾಮಿ ದರ್ಶನ ಆಶೀರ್ವಾದ ಪಡೆದು. ನಂತರ ತಮ್ಮ ತಮ್ಮ ಶುಭ ಮಂಗಲ ಕಾರ್ಯಗಳನ್ನು ನೆರವೇರಿಸಿಕೊಳ್ಳುತ್ತಿರುವುದು ಕಂಡು ಬರುತ್ತದೆ. ತನ್ನ ಪರಮ ಶಿಷ್ಯನಾದ ಜಟ್ಟಿಲಿಂಗೇಶ್ವರನು ಅನವರತವೂ ಸತ್ಯಾಂಶವುಳ್ಳ ಮಾಹಿತಿಯನ್ನು ನೀಡಿ. ಸತ್ಯ ಮಾರ್ಗದಲ್ಲಿ ನಡೆಯುತ್ತ ಬಂದು ಮರುಳಸಿದ್ದೇಶ್ವರರ ಶಿಷ್ಯನಾದ ಜಟ್ಟಿಲಿಂಗೇಶ್ವರನಿಗೆ, ಯಾವಾಗಲೂ ಭಕ್ತರಿಂದ ಪ್ರಥಮ ಪೂಜೆಸಲ್ಲಲೆಂದು, ವರ ನೀಡದರೆಂಬ ಐತಿಹ್ಯದ ಕಾರಣ ಈ ಅಚರಣೆಗೆ ಪ್ರಾಮುಖ್ಯತೆ ಬಂದಿದೆಯನ್ನುತ್ತಾರೆ.

೩. ಮೈಲಾರ ಲಿಂಗನ ಬಂಡೆ

ಈ ಬಂಡೆಯು ಮರುಳಸಿದ್ದೇಶ್ವರ ಸ್ವಾಮಿಯ ಗುಡಿ ಹಿಂದಕ್ಕೆ ಅಂದರೆ ದಕ್ಷಿಣಕ್ಕೆ ಸುಮಾರು ಒಂದು ಕಿ.ಮೀ. ದೂರದಲ್ಲಿದೆ. ಈ ಬಂಡೆಯ ಮೇಲೆ ಎರಡು ಅಂಗಗಳು ಹಾಗೂ ಪಾದಗಳೂ ಇವೆ. ಈ ಬಂಡೆಯ ಮೇಲೆ ಸಣ್ಣ ಗುಡಿಯನ್ನು ಕಟ್ಟಿರುತ್ತಾರೆ. ಕುರುಬ ಜನಾಂಗದವರು ಇಂದಿಗೂ ಸಹ ಈ ಮೈಲಾರ ಲಿಂಗೇಶ್ವರನ ಪೂಜಾಸೇವಕರಾಗಿರುವುದು ಕಂಡು ಬರುತ್ತದೆ. ತಮ್ಮ ಶಿಷ್ಯನಾದ ಮೈಲಾರ ಲಿಂಗೇಶ್ವರ ತನಗೆ ನಿಜಾಂಶದ ಮಾಹಿತಿ ಹೇಳದಿದ್ದರಿಂದ ಸಿಟ್ಟಿಗೊಂಡ. ಆನಂತರ ಮರುಳಸಿದ್ದೇಶ್ವರ ಮೈಲಾರಲಿಂಗನು ಉಜ್ಜಿನಿಯ ಊರ ಹೊರಗೆ ಇರಲಿ ಎಂದು ಶಾಪಕೊಟ್ಟಿರಂತೆ, ಈ ಕಾರಣದಿಂದ ಈ ಬಂಡೆಯು ಊರ ಹೊರಗೆ ಈಗಲೂ ಇದೆ.

[ವಿಶೇಷವೆಂದರೆ ಈಗಲೂ ಕೂಡ ಮರುಳಸಿದ್ದನನ್ನು ಮನೆದೇವರು ಎಂದು ಪೂಜಿಸುತ್ತಿರುವವರು ಮದುವೆ ಸಂದರ್ಭದಲ್ಲಿ. ಮೈಲಾರಲಿಂಗನ ವಕ್ಕಲಿನರ ಜೊತೆ ನಂಟಸ್ಥನವನ್ನು ಬೆಳೆಸುವುದಿಲ್ಲಾ. ಅವರಿಗೆ ಮರುಳಸಿದ್ದಗೂ ಮೈಲಾರಲಿಂಗಪ್ಪನಿಗದೂ ಆಗುವುದಿಲ್ಲ. ಆದ್ದರಿಂದ ನಾವು ಮದುವೆ ಮಾಡಿಕೊಳ್ಳುವುದಿಲ್ಲಾ ಎಂದು ಉಜ್ಜಿನಿ ಜನಪದರು ಹೇಳುತ್ತಾರೆ.]

೪. ಮೆಸಲಟ್ಟಿ ಬಸವಣ್ಣ

ಇದು ಮರುಳಸಿದ್ದೇಶ್ವರ ಗುಡಿಯ ಹಿಂದಕ್ಕೆ ಮೈಲಾರಲಿಂಗನ ಬಂಡೆಗೆ ಸ್ವಲ್ಪ ಹತ್ತಿರದಲ್ಲಿದ್ದು. ಬಸವಣ್ಣನ ವಿಗ್ರಹವು ಉತ್ತರಾಭಿಮುಖವಾಗಿದೆ. ಇದರ ಪಕ್ಕದಲ್ಲಿ ಒಂದು ಉದ್ಭವ ಶಿಲೆಯೊಂದಿದೆ. ಇದಕ್ಕೆ ಜನರು ಮರುಳಸಿದ್ದೇಶ್ವರ ಎಂದು ಕರೆಯುತ್ತಾರೆ. ಮರುಳಸಿದ್ದೇಶ್ವರರು ತಮ್ಮ ಶಿಷ್ಯರಾದ ಜಟ್ಟಿಲಿಂಗೇಶ್ವರ ಭೈರವಸಿದ್ಧ, ಮೈಲಾರಲಿಂಗ, ಇವರೊಡನೆ ಈ ಸ್ಥಳದಲ್ಲಿ ಸೇರಿ ತಾವು ಮುಂದೆ ಎಲ್ಲೆಲ್ಲಿ ನೆಲಸಬೇಕೆಂದು. ವಿಚಾರದ ಮಸಲತ್ತು ಮಾಡಿದೆರೆಂಬ ಐತಿಹ್ಯದ ಕಾರಣದಿಂದ ಇದಕ್ಕೆ "ಮೆಸಲಟ್ಟಿ ಬಸವಣ್ಣ"ನೆಂದು ಇಲ್ಲಿ ಕರೆಯುತ್ತಾರೆ.

೫. ಭೈರವ ಸಿದ್ಧನ ಗುಡ್ಡ

ಈ ಗಡ್ಡವು ಉಜ್ಜಿನಿಗೆ ಸುಮಾರು ೫ ಕಿ.ಮೀ. ದೂರದಲ್ಲಿ ಉತ್ತರ ದಿಕ್ಕಿನ ಕಡೆಗೆ ಇದೆ. ಇದಕ್ಕೆ 'ಭೈರವ ದೇವರ ಗುಡ್ಡ' ಎಂದು ಕರೆಯುತ್ತಾರೆ. ಈ ಗುಡ್ಡದ ಮೇಲೆ ಮಧ್ಯಭಾಗದಲ್ಲಿ ಒಂದು ಗವಿಯಲ್ಲಿ ಕಾಲು ಮುರಿದ ಒಂದು ಶಿಲಾ ವಿಗ್ರಹವಿದೆ ಇದಕ್ಕೆ "ಭೈರವ ಸಿದ್ಧ" ಅಥವಾ "ಭೈರ ಸಿದ್ದ" ನೆಂದು ಕರೆಯುತ್ತಾರೆ. ತನ್ನ ಸಿದ್ಧನಾದ ಭೈರವ ಸಿದ್ಧನು ಶ್ರೀ ಮರುಳಸಿದ್ದೇಶ್ವರನಿಗೆ ನಿಜಾಂಶದ ಮಾಹಿತಿ ನೀಡದಿದ್ದರಿಂದ ನಿಜಾಂಶವು ತಮ್ಮ ಇನ್ನೊಬ್ಬ ಶಿಷ್ಯನಾದ ಜಟ್ಟಿಲಿಂಗೇಶ್ವರನಿಂದ ತಿಳಿದ ಮೇಲೆ ಸಿಟ್ಟಿಗೆದ್ದ ಮರುಳಸಿದ್ದೇಶ್ವರರು ಭೈರವ ಸಿದ್ಧನನ್ನು ಕಾಲು ಮುರಿಯುವ ಹಾಗೆ ಹೊಡೆದು ಉಜ್ಜಿನಿಗೆ ಹತ್ತಿರದ ಒಂದು ಗುಡ್ಡದ ಗವಿಯಲ್ಲಿ ನೆಲಸು ಎಂದು ಶಾಪಕೊಟ್ಟರು ಎಂಬ ವಾಡಿಕೆ ಇಲ್ಲಿದೆ. ಇಂದಿಗೂ ಸಹ ನಾವು ಈ ಕಾಲು ಮುರಿದ ಭೈರವ ಸಿದ್ಧನ ಮೂರ್ತಿಯನ್ನು ಗುಡ್ಡದ ಮೇಲಿನ ಗವಿಯಲ್ಲಿ ನೋಡಬಹುದು. ವಡ್ಡರ ಜನಾಂದವರು ಪೂಜಾ ಸೇವಕರಾಗಿದ್ದಾರೆ. (ಸದ್ಧರ್ಮ ಸಂಚಿಕೆಯಿಂದ)

೬. ಮೂಗಣ್ಣನ ಗುಡಿ

ಈ ಗುಡಿಯು ಉಜ್ಜಿನಿಗೆ ಪಶ್ಚಿಮ ದಿಕ್ಕಿನಲ್ಲಿ ಸುಮಾರು ೮ ಕಿ.ಮೀ. ದೂರಲ್ಲಿದೆ. ಈ ಗುಡಿಯಲ್ಲಿ ಒಂದು ಉದ್ಭವ ಶಿಲಾಲಿಂಗವಿದೆ. ಇದಕ್ಕೆ 'ಶಿರಿಭಿ' ಮೂಗಣ್ಣ ಅಥವಾ ಮೂಗ ಬಸವೇಶ್ವರ ಎಂದು ಕರೆಯುತ್ತಾರೆ. ಇತ್ತೀಚಿಗೆ ಈ ಗುಡಿಯ ನಿರ್ಮಾಣ ಕಾರ್ಯವು ಭಕ್ತರಿಂದ ಹೊಸ ರೂಪ ತಾಳಿದೆ. ಶ್ರೀ ಮರುಳುಸಿದ್ದೇಶ್ವರರು ಸಂಚಾರ ಮಾಡುತ್ತಾ ಈ ಸ್ಥಳಕ್ಕೆ ಬಂದಾಗ ನೂರಾರು ದನಗಳ ಗುಂಪನ್ನು ಮೂಕನಂತೆ ಏಕಚಿತ್ತವಾಗಿ ಸಂತೋಷದಿಂದ ನೋಡುತ್ತಾ, ಅವುಗಳ ಜೊತೆ ವಿಶ್ರಾಂತಿ ಪಡೆದರೆಂಬ ಐತಿಹ್ಯದ ಕಾರಣ ಈ ಗುಡಿಗೆ "ಮೂಗಣ್ಣನ ಗುಡಿ" ಎಂದು ಕರೆಯುತ್ತಾರೆ. ಇಂದಿಗೂ ಸಹ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಪೂಜಾ ಅಭಿಷೇಕ ಕಾರ್ಯ-ಕ್ರಮಗಳು ಈ ಗುಡಿಯಲ್ಲಿ ನಡೆಯುತ್ತವೆ.

೭. ಕುರುವಿನ ಕಲ್ಲು ಗುಡ್ಡ

ಇದು ಮೂಗಣ್ಣನ ಗುಡಿಗೆ ಹತ್ತಿರದಲ್ಲಿಯೇ ಉತ್ತರ ದಿಕ್ಕಿನ ಕಡೆಗೆ ಇದೆ. ಈ ಗುಡ್ಡದ ಮೇಲೆ ಮರುಳುಸಿದ್ದೇಶ್ವರರ [ಕರುವಿನಯ್ಯ] ಒಂದು ಅಂಕಣ ಗುಡಿಯಿದೆ. ಶ್ರೀ ಮರುಳುಸಿದ್ದೇಶ್ವರರು ಇಲ್ಲಿ

ದನಗಳನ್ನು ಸಂರಕ್ಷಣೆ ಮಾಡಿದರೆಂಬ ಐತಿಹ್ಯದಿಂದ ಇಂದಿಗೂ ಸಹ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಭಕ್ತರು ಶ್ರೀ ಮರುಳಸಿದ್ದೇಶ್ವರನ ಪೂಜೆ ಮಾಡಿ ಗುಡ್ಡದ ಮೇಲಿನ ಎರಡು ಸಣ್ಣ ಕಲ್ಲುಗಳನ್ನು ದನ-ಕರುಗಳೆಂದು ಭಾವಿಸಿ ಮನೆಗೆ ತಂದು ವರ್ಷವೆಲ್ಲಾ ಪೂಜೆ ಮಾಡುತ್ತಾರೆ. ಈ ರೀತಿ ಪೂಜೆ ಮಾಡುವುದರಿಂದ ಮನೆಯಲ್ಲಿ ದನ-ಕರುಗಳ ವೃದ್ಧಿ ಮತ್ತು ಸಂರಕ್ಷಣೆಯಾಗುತ್ತದೆ ಎಂಬ ಭಾವನೆ ಜನಪದರಲ್ಲಿ ಮೂಡಿದೆ ಎಂದು ಶಿಕ್ಷಕರಾದ ತೂಲಹಳ್ಳಿ ಪ್ರಕಾಶರ ಅಭಿಪ್ರಾಯ.

**೮. ಸ್ವಾಮಿಯ ಪಾದದ ಕಟ್ಟೆಗಳು**

ಉಜ್ಜಿನಿ ಮತ್ತು ಸುತ್ತಮುತ್ತಲಿನ ಹತ್ತಿರದ ಹಳ್ಳಿಗಳಲ್ಲಿ ಸ್ವಾಮಿಯ ಒಂಬತ್ತು ಪಾದದ ಕಟ್ಟೆಗಳು ಇರುವುದು ಕಂಡು ಬರುತ್ತದೆ. ಶ್ರೀ ಮರುಳುಸಿದ್ದೇಶ್ವರರು ದುಷ್ಟರ ಸಂಹಾರ ಶಿಷ್ಟರ ರಕ್ಷಣೆಗಾಗಿ ನವಖಂಡಗಳನ್ನು ಸಂಚಾರ ಮಾಡಿ ಎಲ್ಲಾ ಕಡೆಗೂ ದಿಗ್ವಿಜಯ ಸಾಧಿಸಿದ ದಿನವೇ "ಭಾರತ ಹುಣ್ಣಿಮೆ ದಿನ"ವೆಂಬ ಐತಿಹ್ಯವಿದೆ. ಇದರ ಕುರುವಾಗಿಯೇ ಧರ್ಮ ರಕ್ಷಣೆಗೋಸ್ಕರ ಶ್ರೀ ಮರುಳಸಿದ್ದೇಶ್ವರು ಉಜ್ಜಿನಿ ಹಾಗೂ ಸುತ್ತಮುತ್ತಲಿನ ಪ್ರದೇಶದ ಹಳ್ಳಿಗಳಲ್ಲಿ ಒಂಬತ್ತು ಪಾದದ ಕಟ್ಟೆಗಳನ್ನು ನಿರ್ಮಿಸಿದರೆಂಬ ಪ್ರತೀತಿಯಿಂದ ಇಂದಿಗೂ ಸಹ ಪ್ರತಿವರ್ಷ ಮಾಘ ಶುದ್ಧ ರಥಸಪ್ತಮಿ ದಿನದ ರಾತ್ರಿಯಿಂದ ಭಾರತ ಹುಣ್ಣಿಮೆಯ ದಿನದವರೆಗೆ ಒಂಬತ್ತು ಪಾದ ಕಟ್ಟೆಗಳ ಪ್ರದಕ್ಷಣೆ ಕಾರ್ಯ ಶ್ರೀ ಸ್ವಾಮಿಯ ಪಾಲಿಗೆ ಉತ್ಸವದೊಡನೆ ಸಹಸ್ರಾರು ಭಕ್ತವೃಂದವರೊಂದಿಗೆ ನಡೆಯುತ್ತದೆ. ಸ್ವಾಮಿಯ ಒಂಭತ್ತು ಪಾದದ ಕಟ್ಟೆಗಳು ಇರುವ ಊರಿನ ಹೆಸರು ಈ ರೀತಿಯಿವೆ.

೧. ಉಜ್ಜಿನಿ ೨. ಬೆಳದೇರಿ ೩. ಮಾಚೇನಹಳ್ಳಿ ೪. ಬೆನಕನ ಹಳ್ಳಿ ೫. ಸೊಕ್ಕೆ ೬. ಸಾಸವೆ ಹಳ್ಳಿ ೭. ಹಾರಕನಾಳು ೮. ಈಚಲ ಕಟ್ಟೆ. ೯. ಭುಜಂಗ ದೇವರಕಟ್ಟೆ.

## ೩. ಕಲೆ ಮತ್ತು ವಾಸ್ತು ಶಿಲ್ಪ *(ಮರುಳ ಸಿದ್ದೇಶ್ವರ ದೇವಾಲಯ)*

ಮರುಳ ಸಿದ್ದೇಶ್ವರ ಸ್ವಾಮಿಯ ಗುಡಿಯು ಉಜ್ಜಿನಿಯಲ್ಲಿರುವ ಸ್ಮಾರಕಗಳಲ್ಲಿ ಅತ್ಯಂತ ಮಹತ್ವದ ಹಾಗೂ ಮಹತ್ವದ ಹಾಗೂ ಪ್ರಮುಖ ದೇವಾಲಯವಾಗಿದೆ. ಇದರ ಗರ್ಭಗುಡಿಯಲ್ಲಿಯೇ ಮರುಳ ಸಿದ್ದೇಶ್ವರ ಲಿಂಗವು ಉದ್ಭವವಾಗಿ ಇಂದಿಗೂ ಸಹ ಪ್ರತಿದಿನ ಭಕ್ತಿಯಿಂದ ಯಾತ್ರಿಕರಿಂದ ತುಂಬಿರುತ್ತದೆ.

ಈ ಗರ್ಭಗುಡಿಯ ಹೊರಭಾಗದ ಮೇಲೆ ಬಹು ದೊಡ್ಡದಾದ ಶಿಲಾಶಿಖರವು ನಂದಿ, ವೀರಭದ್ರ, ವಿನಾಯಕ, ಬ್ರಹ್ಮ ಹಾಗೂ ಇತರೆ ದೇವತಾ ವಿಗ್ರಹಗಳಿಂದ ಕೂಡಿದ್ದಾಗಿರುತ್ತದೆ. ಶಿಖರದ ಮೇಲ್ಭಾವಣೆಯ ಮೇಲೆ ಈ ಪೀಠದ ಮೊದಲ ಗೋತ್ರ ಪುರುಷನಾದ ನಂದಿಯ ವಿಗ್ರಹವು ಧರ್ಮ ಸ್ಥಾಪನೆಗಾಗಿ ತನ್ನ ನಾಲ್ಕು ಪಾದಗಳನ್ನೂರಿ ನಿಂತಿರುವುದರಿಂದ ಈ ಪೀಠಕ್ಕೆ ಸದ್ಧರ್ಮ ಪೀಠವೆಂಬ ಹೆಸರು ಬಂದಿದೆ ಎನ್ನುವ ಪ್ರತೀತಿ ಇದೆ. ಈ ಶಿಲಾ ಗೋಪುರಕ್ಕೆ ಕಳಸ ಬಂಗಾರದ್ದಾಗಿರುತ್ತದೆ. ಪ್ರತಿವರ್ಷ ವೈಶಾಖ ಶುದ್ಧ ಷಷ್ಠಿದಿನ ಸಾಯಂಕಾಲ ಜರ್ಮಲಿ ಪಾಳೆಯಗಾರರು, ಶಿಲಾಗೋಪುರಕ್ಕೆ ತೈಲವನ್ನು ಕಳುಹಿಸಿ ತೈಲಾಭಿಷೇಕವನ್ನು ನೆರವೇರಿಸುತ್ತಾರೆ. ನಂತರ ಎಲ್ಲಾ ಭಕ್ತರ ತೈಲವನ್ನು ಶಿಖರಕ್ಕೆ ಎರೆಯಲಾಗುವುದು.

### ಸಹಸ್ರದಳ ಶಿಲಾ ಕಮಲ

ಮರುಳಸಿದ್ಧೇಶ್ವರ ದೇವಸ್ಥಾನದ ಒಳಬಾಗದ ಗರ್ಭಗುಡಿಯ ಮುಂಭಾಗದ ಅಂಕಣದ ಮೇಲ್ಛಾವಣಿಯಲ್ಲಿ, ಶಿಲ್ಪ ಕಲಾಕೃತಿಗಳಿಂದ ಕೂಡಿದ ಘಟಿಲಿಂಗ ಚಕ್ರವೆಂಬ ಸಹಸ್ರದಳದ ಶಿಲಾ ಕಮಲವು ಕಂಡುಬರುತ್ತದೆ. ಇದು ಅಮರಶಿಲ್ಪ ಜಕಣಾಚಾರಿಯಿಂದ ನಿರ್ಮಾಣವಾಗಿದೆ ಎಂಬ ಐತಿಹ್ಯವುಂಟು. ಅಲ್ಲದೆ ಈ ಅಂಕಣದಲ್ಲಿ ಜಕಣಾಚಾರ್ಯರ ಶಿಲಾ ವಿಗ್ರಹವನ್ನು ಸಹ ಇಂದಿಗೂ ನೋಡಬಹುದು. ಗರ್ಭಗುಡಿಯ ಮುಂಭಾಗದ ಅಂಕಣದ ಎಡ-ಬಲಗಳ ಗೋಡೆಯಲ್ಲಿ ೧೪ ಸಣ್ಣ ಶಿಲಾ ಮಂಟಪದ ಗೂಡುಗಳಲ್ಲಿ ೧೪ ಶಿಲಾ ವಿಗ್ರಹಗಳಿರುವುದು ಕಂಡುಬರುತ್ತದೆ. ಪಶ್ಚಿಮ ದ್ವಾರದ ಮೂಲಕ ಗರ್ಭಗುಡಿ ಪ್ರವೇಶ ಮಾಡುವ ಭಕ್ತರು ಮೊದಲು ಉತ್ತರಾಭಿಮುಖವಾಗಿರುವ ಪಾಪ ವಿಮೋಚನೆಯೆಂಬ ದೇವತ ಶಿಲಾ ವಿಗ್ರಹದ ದರ್ಶನ ಪಡೆದು ಒಳಗೆ ಬರುತ್ತಾರೆ. ಅನಂತರ ಭಕ್ತರು ತಾವು ಮಾಡಿದ ಪಾಪ ಕೃತ್ಯಗಳಿಗೆ ವಿಮೋಚನೆ ಸಿಗಲೆಂಬುದರ ಸಂಕೇತವಾಗಿ ಈ ವಿಗ್ರಹ ಸ್ಥಾಪನೆಯಾಗಿದೆಯೆಂಬ ಪ್ರತೀತಿ ಇಂದಿಗೂ ಉಜ್ಜಿನಿ ಜನಪದರ ನಂಬಿಕೆಯಾಗಿರುತ್ತದೆ.

### ಚಾಲುಕ್ಯ ಶಿಲ್ಪ

ಉಜ್ಜಿನಿ ದೇವಾಲಯ ಚಾಲುಕ್ಯ ಹಾಗೂ ಹೊಯ್ಸಳ ಶಿಲ್ಪಕಲೆಯ ಮಾದರಿಯಾದ್ದಾಗಿರುತ್ತದೆ. ದೇವಾಲಯದ ಗರ್ಭಗ್ರಹ ಮತ್ತು ಅವುಗಳ ಮೇಲೆ ಮೂಡಿದ ಶಿಖ ಇವನ್ನು ಒಟ್ಟಿಗೆ ವಿಮಾನ ಎಂದು ಕರೆಯುವರು, ಗರ್ಭಗೃಹದ ಮುಂದಿನದೇ ಅನೇಕ ಕಂಬಗಳಿಂದ ಕೂಡಿದ ರಂಗ ಮಂಟಪ (ನವರಂಗ) ಗರ್ಭಗೃಹಕ್ಕೂ ರಂಗಮಂಟಪವನ್ನು ಸೇರಿಸುವ ಮದ್ಯದ ಮಂಟಪವನ್ನು "ಸುಕನಾಸಿ ಎಂದು ಕರೆಯುವರು. ಇದು ಪೂಜಾಧಿ ಪರಿಕರಗಳಿಗೆ ಅನುಕೂಲವನ್ನು ಕಲ್ಪಿಸುವುದು, ಈ ದೇವಸ್ಥಾನ ಪ್ರಾಚೀನ ಚಾಲುಕ್ಯ ದೇವಸ್ಥಾನವನ್ನು ಹೋಲುವಂತಿದೆ. (ಐಹೊಳೆಯ ಲಾಡ್‌ಖಾನ್ ದೇವಾಲಯ) ಇಲ್ಲಿನ ಮುಖ್ಯ ಸ್ವರೂಪವೆಂದರೆ ಚಚ್ಚೌಕವಾಗಿರುವ ಕಲ್ಲು ಕಂಬಗಳು ಅವುಗಳಿಗೆ ಸುರುಳಿಯಾಕಾರದ ಚಾಚು ಪೀಠಗಳಿಂದ ಕೂಡಿದ ಬೋದಿಗೆಗಳಿವೆ. ಕಂಬದ ಮೇಲೆ ಶೈವ ಸಂಪ್ರದಾಯದ ಅಲಂಕಾರ ಚಿತ್ರಗಳನ್ನು ಕೆತ್ತಲಾಗಿದೆ. ದೇವಾಲಯದ ಗೋಡೆಗಳು ಅಷ್ಟಾಗಿ ಅಲಂಕೃತವಾಗಿಲ್ಲ.

### ಹೊಯ್ಸಳ ಶಿಲ್ಪ

"ರೀ" ಎಂಬ ವಿದ್ವಾಂಸರು ಹೊಯ್ಸಳ ಶಿಲ್ಪದ ಬಗ್ಗೆ ಈ ರೀತಿ ಹೇಳುತ್ತಾರೆ. ಹೊಯ್ಸಳ ವಾಸ್ತುರೀತಿಯ ದೇವಾಲಯಗಳ ವಿನ್ಯಾಸ ರೂಪ ಆಕಾರಗಳಲ್ಲಿಯೂ ವಾಸ್ತುವಿನ ಭಾವ ಪ್ರೇರಣೆಗಳಲ್ಲೂ ರಚನಾಚಾತುರ್ಯದಲ್ಲೂ ಚಾಲುಕ್ಯ ಶೈಲಿಯನ್ನೇ ಮುಂದುವರೆಸಿಕೊಂಡು ಬಂದಿದೆ. ಹೊಯ್ಸಳರ ದೇವಾಲಯಗಳು ನಕ್ಷತ್ರಾಕೃತಿಯವು. ಚಿನ್ನ ಬೆಳ್ಳಿಯ ಸೂಕ್ಷ್ಮ ಕೆತ್ತನೆ ಕೆಲಸಗಳಿಗಿಂತ, ಇಲ್ಲಿಯ ಕೆತ್ತನೆಗಳು ಸೊಗಸಾಗಿವೆ. ದೇವಾಲಯ ಶಿಲ್ಪ ಕೆತ್ತನೆಯ ಮಹತ್ವ ವಿನ್ಯಾಸಕ್ಕಿಂತ ಅವುಗಳ ಪ್ರಮಾಣದಲ್ಲಿದೆ. ಹೊಯ್ಸಳ ಶಿಲ್ಪ ಕೆತ್ತನೆಗೆ ಬಳಸಿದ ಶಿಲೆ ಮೃದುವಾದ ಕಪ್ಪನೆಯ ಕಲ್ಲು (ಬಳಸದ

ಶಿಲೆ) ಉಜ್ಜೈನಿ ದೇವಾಲಯವನ್ನು ಪರಿಶೀಲಿಸಿದರೆ ಚಾಲುಕ್ಯ ಹಾಗೂ ಹೊಯ್ಸಳ ಶಿಲ್ಪ ಸಂಗಮವನ್ನು ನಾವು ನೋಡಬಹುದು. ಇದು ಅವರೀರ್ವರ್ ಬಾಂದವ್ಯದ ಸಂಕೇತವಾಗಿದೆ. ಹೊಯ್ಸಳ ಶಿಲ್ಪ ಜಕ್ಕಣಾಚಾರಿಯನ್ನು ಬೀಗರ ಕೆಲಸಕ್ಕಾಗಿ (ಚಾಲುಕ್ಯ ಸಾಮಂತ ಇರುಕ್ಕವೇಲ) ಹೊಯ್ಸಳರ ಅರಸ ಉಜ್ಜೈನಿಗೆ ಕಳಿಸಿರಬೇಕು ಎಂಬುದು ಕನ್ನಡ ಪ್ರಭ ಉಪಸಂಪಾದಕ ರುದ್ರಪ್ಪನವರ ಅಭಿಪ್ರಾಯ. ಈ ದೇವಾಲಯದ ಕಲ್ಲಿನಿಂದ ಜಕ್ಕಣಾಚಾರಿ ತಾನು ಕಂಡ ಸಾಕ್ಷಾತ್ಕಾರದ ಭವ್ಯತೆಯನ್ನು ಮೂಡಿಸಿರಬೇಕು.

ಹೀಗಾಗಿ ಈ ದೇವಾಲಯ ೧೦-೧೧ನೇ ಶತಮಾನದ ಮಧ್ಯದಲ್ಲಿ ಕಟ್ಟಲಾಗಿರುತ್ತದೆ. ಮರುಳು ಸಿದ್ದೇಶ್ವರ ದೇವಾಲಯದ ಸ್ಥಾಪನೆಯಿಂದಲೇ ಸಿಂಹಾಸನ ಸ್ಥಾಪನೆ ಸುಮಾರು ೧೦-೧೧ನೇ ಶತಮಾನವೆಂದು ಭಾವಿಸುವುದು ಸೂಕ್ತವಲ್ಲ, ಈಗಾಗಲೇ ತಿಳಿಸಿದಂತೆ ಮರುಳಾರಾಧ್ಯರು, ಅವಿರ್ಭಜಿಸಿ ಶಿವತತ್ವ ಪ್ರತಿಪಾದನೆಗಾಗಿ ಬಂದು ಬಳ್ಳಾರಿ ಜಿಲ್ಲೆಯ ಉಜ್ಜೈನಿಯಲ್ಲಿ ಈಗಿನ ಮಠವನ್ನು ಸ್ಥಾಪಿಸಿದರು. "ಹಂಪೆ ಹೊರನೋಡು ಉಜ್ಜೈನಿ ಒಳನೋಡು" ಎಂಬ ಗಾದೆ ಮಾತು ಇಲ್ಲಿನ ಶಿಲ್ಪಕಲೆ ವಾಸ್ತುಶಿಲ್ಪದ ಮೇಲೆ ಬೆಳಕನ್ನು ಹರಿಸುತ್ತದೆ.



**ಅಡಿ ಟಿಪ್ಪಣಿ**

೧. ಈ ಮಾಹಿತಿಯನ್ನು ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಸಿ.ಎಂ. ವೀರಭದ್ರಯ್ಯ ಮತ್ತು ಉಜ್ಜೈನಿ ಜನಪದರಿಂದ ಮಠದ ಅಧಿಕಾರಿಗಳಿಂದ ಸಂಗ್ರಹಿಸಲಾಗಿದೆ.

# ಅಧ್ಯಾಯ ೪

# ಉಜ್ಜನಿಯ ಜನಪದರ ಬದುಕು

## ಅ. ಸಾಮಾಜಿಕ ವ್ಯವಸ್ಥೆ

ಮನುಷ್ಯನು ಭೌತಿಕ ಹಾಗೂ ಭಾವನಾತ್ಮಕ ಅವಶ್ಯಕತೆಗಳಿಗನುಗುಣವಾಗಿಯೇ ಸಮಾಜ ರಚನೆ ಮಾಡಿಕೊಂಡಿರುತ್ತಾರೆ. ಈ ವ್ಯವಸ್ಥೆಯಲ್ಲಿ ಕುಟುಂಬಕ್ಕೆ ಪ್ರಥಮ ಆದ್ಯತೆ ಸಲ್ಲುತ್ತದೆ. ತರುವಾಯ ಉದ್ಯೋಗ ಪರಿಗಣಿಸಲ್ಪಡುತ್ತದೆ. ಭಾರದಂತ ದೇಶದಲ್ಲಿ ಕೃಷಿಯ ಪ್ರಧಾನ ಉದ್ಯೋಗವಾಗಿರುವಂತೆಯೇ ಅದಕ್ಕೆ ಹೊಂದಿಕೊಂಡು ಬೇರೆ ಬೇರೆ ವೃತ್ತಿಗಳು ಸೃಷ್ಟಿಗೊಂಡಿವೆ. ಗ್ರಾಮೀಣ ಪ್ರದೇಶದಲ್ಲಿ ಕೃಷಿ ಮುಖ್ಯವಾದರೆ ಕಂಬಾರಿಕೆ, ಬಡಿಗಿತನ, ಕುಂಬಾರಿಕೆ ಮುಂತಾದವುಗಳು ಕೃಷಿಯನ್ನವಲಂಬಿಸಿ ಬೆಳೆದ ವೃತ್ತಿಗಳೆನಿಸುತ್ತವೆ. ಈ ಉದ್ಯೋಗಗಳು ಭೌತಿಕ ಬದುಕಿಗೆ ಆಸರೆಯಾಗಿದ್ದರೆ, ದೇವರು-ಧರ್ಮಗಳಂಥ ಭಾವುಕ ನಂಬಿಕೆಗಳ ಹಿನ್ನೆಲೆಯಲ್ಲಿ ಅನೇಕ ಸಂಪ್ರದಾಯ ಆಚರಣೆಗಳು ರೂಢಿಗೊಳಗಾಗುತ್ತವೆ. ಈ ಅಂಶಗಳನ್ನು ದಾಟಿಕೊಂಡು ಸಾಮಾಜಿಕ ಜೀವನದ ವ್ಯವಸ್ಥಿತ ನಡಿಗೆ, ನೀತಿ ಸಂಹಿತೆ ಬೇಕೆಂದು ಆಡಳಿತಾತ್ಮಕ ವಿಧಾನವೊಂದು ಹಳ್ಳಿ ಬದುಕಿನ ದೈನಂದಿನ ಜೀವನಕ್ಕೆ ಅವಶ್ಯವೆನಿಸುತ್ತದೆ.

ಒಂದು ಕಾಲಕ್ಕೆ ತನ್ನಷ್ಟಕ್ಕೆ ತಾನು ಸಹಜವಾಗಿ ರೂಪಗೊಂಡ ಈ ರಚನೆಯಲ್ಲಿ ಕಾಲಕ್ರಮೇಣ ಭಾವುಕ ನಿಯಮಗಳು ಸೇರ್ಪಡೆಯಾಗಿ ಗ್ರಾಮೀಣ ಪರಿಸರವನ್ನು ಆವರಿಸಿಕೊಂಡದ್ದುಂಟು. ಈ ಭಾವುಕತನ ಉದ್ಯೋಗದಂತಹ ಭೌತಿಕ ಪರಿಶ್ರಮಕ್ಕೂ ವ್ಯಾಪಿಸಿಕೊಂಡಿರುವುದು ಆಶ್ಚರ್ಯವೆನಿಸುತ್ತದೆ. ಒಕ್ಕಲುತನವನ್ನು ಇಂಥವರೇ ಮಾಡಬೇಕು. ಇಂಥವರೇ ಕುರಿಕಾಯಬೇಕು. ಇವರೇ ಬಡಿಗರು, ಕಂಬಾರರು, ಎಂಬುದು ಗಟ್ಟಿಗೊಳ್ಳುತ್ತ ಆಯಾ ಉದ್ಯೋಗ ಮಾಡುವ ಗುಂಪುಗಳು ಜಾತಿಗಳಾಗಿ ಕಾಲಕ್ರಮೇಣ ಸಮಾಜ ರಚನೆಯಲ್ಲಿ ಜಾತಿ ವ್ಯವಸ್ಥೆ ಎಂಬುದು ಪ್ರಮುಖ ಅಂಶವಾಯಿತು.

ಈ ಬಗೆಯ ಸಮಾಜ ರಚನೆಯ ಓನ್ನೆಲೆಯಲ್ಲಿ ಉಜ್ಜನಿ ಸಾಮಾಜಿಕ ವ್ಯವಸ್ಥೆಯನ್ನು ನಾಲ್ಕು ನಿಟ್ಟನಿಂದ ಅಭ್ಯಸಿಸಲಾಗಿದೆ. ಅವುಗಳೆಂದರೆ :

೧. ಕುಟುಂಬ ವ್ಯವಸ್ಥೆ

೨. ಉದ್ಯೋಗ ವ್ಯವಸ್ಥೆ

೩. ವರ್ಣ ವ್ಯವಸ್ಥೆ

೪. ಆಡಳಿತ ವ್ಯವಸ್ಥೆ

ಉಜ್ಜಿನಿಯ ಕುಟುಂಬ ವ್ಯವಸ್ಥೆ ಕರ್ನಾಟಕದ ಬಹುತೇಕ ಹಳ್ಳಿಗಳಂತೆಯೇ ಇದೆ. ತರುವಾಯದ ಹಂತದಲ್ಲಿ ಉಜ್ಜಿನಿಯ ಮುಖ್ಯ ಉದ್ಯೋಗವೆನಿಸಿದ ಒಕ್ಕಲುತನವನ್ನು ವಿವರಿಸಿ ಉಜ್ಜಿನಿಗೆ ವಿಶಿಷ್ಟವಾದ ವ್ಯಾಪಾರ ಉದ್ಯೋಗವನ್ನು ಉಲ್ಲೇಖಿಸಬೇಕಾಗುತ್ತದೆ. ಮೂರನೆಯ ಹಂತದಲ್ಲಿ ಉದ್ಯೋಗ ವ್ಯವಸ್ಥೆಯನ್ನು ಅನುಸರಿಸಿಯೇ ವರ್ಣ ವ್ಯವಸ್ಥೆಯನ್ನು ವಿಂಗಡಿಸಿ ವಿಶ್ಲೇಷಿಸಬೇಕಾಗುತ್ತದೆ. ಇಲ್ಲಿ ಮುಖ್ಯ ಉದ್ಯೋಗ ಒಕ್ಕಲುತನವನ್ನಾ ಶ್ರಮಿಸಿದ ವರ್ಣಗಳು ಒಂದು ಗುಂಪಾದರೆ ಈ ಒಕ್ಕಲಿಗರನ್ನಾಶ್ರಯಿಸಿದ ಇತರ ವರ್ಣಗಳು ಎರಡನೆಯ ಗುಂಪಾಗುತ್ತವೆ. ಪ್ರತಿಯೊಂದು ಜಾತಿಯನ್ನೇ ನೋಡುವಾಗ ಅವರಲ್ಲಿಯ ಒಳಪಂಗಡಗಳು, ಅವರ ದೇವರು, ಸಂಪ್ರದಾಯ ಮತಾಚರಣೆ ಹೀಗೆ ಅನುಷಂಗಿಕವಾಗಿ ಬರುವ ಅನೇಕ ವಿಷಯಗಳನ್ನು ಇಲ್ಲಿ ಗಮನಿಸಬೇಕಾಗುತ್ತದೆ. ನಾಲ್ಕುನೆಯದಾಗಿ ಇವರೆಲ್ಲ ಸುರಕ್ಷಿತ ಬದುಕಿಗೆ ಆಡಳಿತ ವ್ಯವಸ್ಥೆಯೆಂಬುದೊಂದು ಬೇಕು. ಅದಿಲ್ಲಿ ಗೌಡ, ತಳವಾರ ಊರ ಹಿರಿಯರು, ಮುಂತಾಗಿ ಮುಂದುವರಿಯುತ್ತದೆ. ಇದುವರೆಗಿನ ಅಂಶಗಳನ್ನು ಇನ್ನು ಮುಂದೆ ವಿವರವಾಗಿ ನೋಡಬಹುದು.

## ೧. ಕುಟುಂಬ ವ್ಯವಸ್ಥೆ

ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬವೆನ್ನುವುದು ಒಂದು ಪ್ರಮುಖವಾದ ಘಟಕ. ಗ್ರಾಮ ಜೀವನದಲ್ಲಿ ಕುಟುಂಬ ಸಂಸ್ಕೃತಿ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸುತ್ತದೆ. ಒಂದು ಕುಟುಂಬದಲ್ಲಿನ ವ್ಯಕ್ತಿ-ವ್ಯಕ್ತಿಗಳ ಸಂಬಂಧ ಇವರು ವಾಸಿಸುವ ಮನೆ, ಪ್ರೀತಿಸುವ ದನಕರು, ಮಾಡುವ ಊಟ. ಧರಿಸುವ ಉಡುಗೆ ಇವೆಲ್ಲವುಗಳ ನಿರೂಪಣೆ ಕುಟುಂಬದ ಹಿನ್ನೆಲೆಯಲ್ಲಿ ಬಂದು ಸಮಾಜದ ಒಪ್ಪಂದದ ಸಮೀಕ್ಷೆಯಲ್ಲಿ ಅಭ್ಯಾಸ ಯೋಗ್ಯವೆನಿಸುತ್ತದೆ.

ನಮ್ಮ ದೇಶದ ಬಹುತೇಕ ಹಳ್ಳಿಗಳಲ್ಲಿರುವಂತೆ ಉಜ್ಜಿನಿಯಲ್ಲಿಯೂ ಪಿತೃ ಪ್ರಧಾನವಾದ ಕುಟುಂಬ ಪದ್ಧತಿಯೇ ಇದೆ. ತಂದೆ ಮನೆಯ ಹಿರಿಯನಾದರೆ ಅವನ ಹೆಂಡತಿ, ಮಕ್ಕಳು ಸೊಸೆಯಂದಿರು, ಮೊಮ್ಮಕ್ಕಳು ಎಲ್ಲಾ ಅವನಿಗೆ ಅನುವರ್ತಿಗಳಾಗಿ ನಡೆದುಕೊಳ್ಳುತ್ತಾರೆ. ಕುಟುಂಬದ ಅಸ್ತಿತ್ವಕ್ಕೆ ಇವನ ಹಿರಿತನದಲ್ಲಿ ಗುರುತಿಸಲ್ಪಡುತ್ತಾರೆ. ಕುಟುಂಬದ ಅವಿಭಕ್ತ-ವಿಭಕ್ತ ಯಾವುದೇ ಇರಲಿ, ತಂದೆಯ ತರುವಾಯ ಅವನ ಹಿರಿಯ ಮಗನಿಗೆ ಅಪಟ್ಟ ಹೋಗುತ್ತದೆ. ಅವಿಭಕ್ತ ಕುಟುಂಬಗಳು ಹೆಚ್ಚಾಗಿದ್ದ ಕಾಲಕವೊಂದಿತ್ತು. ಮುಂಚಿನ ರೀತಿ ಈಗ ಉಳಿದಿಲ್ಲ. ಅವಿಭಕ್ತ ಕುಟುಂಗಳು ಕರಗುತ್ತಿವೆ. ಆದರೆ ಹೊತ್ತು-ವೇಳೆ ಬಂದಾಗ ಅಣ್ಣ ತಮ್ಮಂದಿರು ಒಬ್ಬರಿಗೊಬ್ಬರು ಆಗುತ್ತಾರೆ. ಅವಿಭಕ್ತ ಕುಟುಂಬಗಳು ಕರಗುತ್ತಿದ್ದರೂ ತಂದೆ-ತಾಯಿಗಳಿಗೆ ಅನಾಥ ಪ್ರಜ್ಞೆ ಕಾಡುವುದಿಲ್ಲ. ಮಕ್ಕಳು ಬೇರೆಯಾದುದಕ್ಕೆ ಮರುಗಬಹುದು ಅಷ್ಟೇ. ಮಗನೊಬ್ಬನ ಕಡೆಗೆ ಇವರು ಸುರಕ್ಷಿತವಾಗಿರುತ್ತಾರೆ. ಆ ಮಟ್ಟಿದೆ ಇನ್ನೂ ಹಳ್ಳಿಗಳಲ್ಲಿ ಉಳಿದಿರುವ ಸಂಸ್ಕಾರ ಉಜ್ಜಿನಿಯಲ್ಲಿಯೂ ಉಳಿದುಕೊಂಡಿದೆ.

ಈ ಕುಟುಂಬ ಸದಸ್ಯರು ವಾಸಿಸುವ ಮನೆ ಇವರ ಊಟ-ಉಡಿಗೆಗಳನ್ನು ಇನ್ನೂ ಮುಂದೆ ಅವಲೋಕಿಸಿ ತರುವಾಯ ಉಜ್ಜಿನಿಯ ಒಟ್ಟು ಅಂದವಾದ ಸಾಮಾಜಿಕ ವ್ಯವಸ್ಥೆಯ ಇತರ ಅಂಶಗಳನ್ನು ಗುರುತಿಸಬಹುದು.

ಉತ್ತರ ಕರ್ನಾಟಕದ ರೀತಿಯಲ್ಲಿಯೇ ಉಜ್ಜಿನಿಯಲ್ಲಿ ಮಣ್ಣಿನ ಮಾಳಿಗೆಯ ಮನೆಗಳಿವೆ. ಮಾಳಿಗೆಯ ಮೇಲೆ ಮೊಳಕಾಲೆತ್ತರ ಕುಂಬಿಗಳಿವೆ. ಮಾಳಿಗೆಯ ಮೇಲೆ ಬಿದ್ದ ಮಳೆನೀರು ಹರಿದು ಹೋಗಲು ಹರಿನಾಳಿಗೆ ಇರುತ್ತವೆ. ಮನೆ ಹೊರಗೆ ಕಟ್ಟೆ ಇರುತ್ತವೆ. ಮನೆಯನ್ನು ಪ್ರವೇಶಿಸುವುದು ತೆಲೆಬಾಗಿಲಿನ ಮುಖಾಂತರ-ಹೊಸ್ತಿಲನ್ನು ದಾಟಿ ಹೋಗಬೇಕು. ಉಜ್ಜಿನಿ ಮನೆಗಳ ತೆಲೆಬಾಗಿಲು ತುಂಬ ಆಗಲವಾಗಿವೆ. ಇಲ್ಲಿಯ ಬಹಳಷ್ಟು ತಲೆಬಾಗಿಲು ಸಾಗವಾನಿ ಕಟ್ಟಿಗೆಯಿಂದ ಮಾಡಿದವುಗಳು. ಹೊಸ್ತಿಲು ತುಂಬ ಪೂಜ್ಯನೀಯವಾದುದು. ಅದರ ಮೇಲೆ ಕೂಡುವಂತಿಲ್ಲ.

ಹೊಸ್ತಿಲನ್ನು ದಾಟುವಾಗ ಆಕಸ್ಮಿಕ ಸೀತರೆ ಅದಕ್ಕೆ ನೀರು ಹಾಕಬೇಕು. ಕಾಲನ್ನು ಬಡಿಸಿದರು ಬಗ್ಗಿ ನಮಸ್ಕಾರ ಮಾಡಿಬೇಕು. ಹೊಸ್ತಿಲನ್ನು ದಾಟಿದ ಕೂಡಲೇ ದನಕರು ಕಟ್ಟಲು ವ್ಯವಸ್ಥೆಯಿರುವ 'ದಾಭೆ'ಯಲ್ಲಿ ಅಥಾವ ದನದ ಹಕ್ಕೆಯಲ್ಲಿ ಕಾಲಿಡುತ್ತೇವೆ. ಇದು ಭೂಮಿ ಮಟ್ಟದಲ್ಲಿಯೇ ಇರುತ್ತದೆ. ಹಕ್ಕೆಯ ಒಂದು ಬದಿಯಲ್ಲಿ ಎತ್ತರವಾದ ಕಟ್ಟೆ ಕಟ್ಟಿ ಹೊಟ್ಟಿನ ಪುಟ್ಟಿ ಸೊಪ್ಪೆಯ ಹೊರೆಗಳನ್ನು ಇಟ್ಟಿರುತಾರೆ. ದೊಡ್ಡ ದೊಡ್ಡ ರೈತರು ಈ ಕಟ್ಟೆಯ ಬುಡದಲ್ಲಿಯೇ ಕೊರೆದ ಕಣಿಕೆ ಒಟ್ಟಲು ಮೇವಿನ ಗೂಣನ್ನು ಮಾಡಿಕೊಂಡಿರುವುದುಂಟು. ದನದ ಹಕ್ಕೆಯ ಒಂದು ಗೋಡೆಯಗುಂಟು ೩-೪ ಅಡಿ ಎತ್ತರದ ಗ್ವಾದಲಿ ಇದ್ದು, ಇದರಲ್ಲಿ ಎತ್ತುಗಳಿಗೆ ತಿನ್ನಲು ಹೊಟ್ಟು, ಸೊಪ್ಪೆ, ಹಾಕಲಾಗುತ್ತದೆ. ದನದ ಹಕ್ಕೆಯಲ್ಲಿ ಇದಿರು ಗ್ವಾದಲಿ ಎಂಬ ಇನ್ನೊಂದು ಬಗೆಯೂ ಉಂಟು. ಇಂಥದು ಹಕ್ಕೆಯ ಮಧ್ಯದಲ್ಲಿಯೇ ಇದ್ದು, ದನಗಳು ಇಲ್ಲಿ ಎದುರುಬದುರಾಗಿ ನಿಲ್ಲಲು ಸ್ಥಳವಕಾಶವಿರುತ್ತದೆ. ಹಕ್ಕೆಯ ಒಂದು ಮೂಲೆಯಲ್ಲಿ ಗಳಕಟ್ಟಿ ಒಕ್ಕಲುತನದ ಅನೇಕ ಉಪಕರಣಗಳನ್ನು ನೇತು ಹಾಕುತ್ತಾರೆ.

ದನದ ಹಕ್ಕೆಯನ್ನು ದಾಟಿ ಮೇಲೆ ಹತ್ತಿದರೆ 'ಪಡಸಾಲಿ' ಇದು ಭೂಮಿಮಟ್ಟದಿಂದ ೩-೪ ಅಡಿ ಎತ್ತರವಾಗಿದ್ದು ಸಾಕಷ್ಟು ದೊಡ್ಡದಾಗಿರುತ್ತದೆ. ಮನೆಗೆ, ಬಂದ ಅತಿಥಿಗಳಿಗೆ ಪ್ರವೇಶ ಮಾಡಿದ ಕೂಡಲೇ ಸಾಮಾನ್ಯವಾಗಿ ಕುಳಿತುಕೊಳ್ಳುವುದು. ಇಲ್ಲಿಯೇ, ಪೆಡಸಾಲೆಯ ಗೋಡೆ ಸಾಕಷ್ಟು ಗೂಣು-ಬೀರುಗಳಿಂದ (ಮಾಡು) ಕೂಡಿರುತ್ತದೆ. ಇವುಗಳಲ್ಲಿ ನಿತ್ಯ ಬಳಕೆಯ ವಸ್ತುಗಳನ್ನಿಡುವಂತೆ ಗೂಟಗಳಿಗೆ ಬಟ್ಟೆಗಳನ್ನು ಹಾಕುವ ವ್ಯವಸ್ಥೆ ಮಾಡಲಾಗಿರುತ್ತದೆ. ಪಡಸಾಲಿಯಿಂದ ನಡುಮನಗೆ ಹೋಗುವ ಬಾಗಿಲ ಮೇಲೆ ಆಚೀಚೆಯ ಗೋಡೆಯ ಮೇಲೆ ತಮ್ಮ ಮನೆಯವರ ಪೋಟೋಗಳೂ ಅಲ್ಲಿ ಕಂಗೊಳಿಸುತ್ತವೆ. ಜೊತೆಗೆ ಇಷ್ಟ ದೇವತೆಗಳ ಪೋಟೋಗಳನ್ನು ತೂಗು ಹಾಕುತ್ತಾರೆ. ನುಡುಮನೆಯ ಇದೇ ಬಾಗಿಲಿಗೆ ಸುಂದರವಾದ ತೋರಣವಿರುತ್ತದೆ. ಕಾಲದಿಂದ ಕಾಲಕ್ಕೆ ಈ ತೋರಣದ ವಿನ್ಯಾಸವೂ ಬದಲಾಗುತ್ತಾ ಬಂದಿದೆ. ಮೊದಲಿನ ಕಾಲದಲ್ಲಿ ಬಳೆಚೂರಗಳನ್ನು ಕಾಸಿ. ಮಣಿಸಿ ಮಾಡಿದ ತೋರಣಗಳಿರುತ್ತಿದ್ದವು. ಬರುಬರುತ್ತಾ ನೂಲಿನ ತೋರಣಗಳು ಬಂದವು. ಈಗ ಪ್ಲಾಸ್ಟಿಕ್ ಎಳೆಯ ತೋರಣಗಳು ಬಾಗಿಲನ್ನಲಂಕರಿಸಿವೆ. ನಡುಮನೆಯಲ್ಲಿ ಕಾಳಿನ ಚೀಲಗಳನ್ನು ಒಟ್ಟಿರಲಾಗುತ್ತದೆ. ಗುಡಾರ ತಾಡಪಲ್ಲುಗಳನ್ನು ಇಲ್ಲಿಯೇ ಇಡಲಾಗುವುದು. ನಿತ್ಯದ ಜಮಖಾನ, ಚಾಪಿ, ದುಪ್ಪಡಿ (ಬೇಡ್‌ಸಿಟ್) ಕೌದಿ, ಕಂಬಳಿ, ಮುಂತಾದ

ಹಾಸಿಗೆಗಳೂ ಇಲ್ಲಿಯೇ ಸ್ಥಾನ ಪಡೆಯುತ್ತವೆ.

ನಡುಮನೆಯನ್ನು ದಾಟಿ ಹೋದರೆ ಅಡುಗೆಮನೆ ಬರುತ್ತದೆ. ಅಡುಗೆ ಮನೆಯಂಬುದು ಮನೆಯ ಪ್ರಮುಖ ಭಾಗ. ನಾಲ್ಕಾರು ಜನ ಕುಳಿತುಕೊಂಡು ಊಟ ಮಾಡುವಷ್ಟು ಇದು ದೊಡ್ಡದಾಗಿರುತ್ತದೆ. ಅಡುಗೆ ಮನೆಯ ಒಂದು ಮೂಲೆಯಲ್ಲಿ ಬಚ್ಚಲಿದ್ದು, ಅದೇ ಬದಿಯಲ್ಲಿ ನೀರಿನ ಹಂಡೆ, ತಪ್ಪೇಲಿಗಳನ್ನಿರಿಸಿದ ಕಟ್ಟೆಯಿರುತ್ತದೆ. ಇನ್ನೊಂದು ಕಡೆ ತಾಟು, ಪ್ಲೇಟು, ತಂಬಿಗೆ, ಲೋಟ, ಚಮಚ, ಮುಂತಾದ ಭಾಂಡೆ ಸಾಮಾನುಗಳನ್ನಿಡಲು ಸೆಲ್ಪನ್ನು ಗೋಡೆಗೆ ಅಳವಡಿಸಲಾಗಿರುತ್ತದೆ. ಹಾಲು ಮೊಸರಿನ ಗಡಿಗೆ, ಕುಡಿಕೆಗಳನ್ನಿಡಲು ಮುಂಚೆಲ್ಲ ನೆಲವುಗಳೇ ವಿಶೇಷವಾಗಿದ್ದವು. ಈಗ ಗೋಡೆಯಲ್ಲಿಯೇ ಕಪಾಟು ಮಾಡಲಾಗಿರುತ್ತದೆ. ನಂತರ ತ್ರಿಕೋನಕಾರದಲ್ಲಿ ಮೂರು ದುಂಡನೆಯ ಕಲ್ಲುಗಳನಿಟ್ಟು-ಇವು ಒಲೆಗುಂಡುಗಳೆಸುತ್ತವೆ. ಒಲೆ ರಚಿಸಲಾಗಿರುತ್ತದೆ. ತಾತ್ಪೂರ್ತಿಕವಾಗಿ ಅಂದಿಂದಿಗೆ ಬೇಕಾಗುವಷ್ಟು ಕಟ್ಟಿಗೆ, ಕುಳ್ಳು, ಇಟ್ಟುಕೊಳ್ಳಲು ಒಲೆಯ ಬದಿಯಲ್ಲಿ ಸ್ಥಳವಕಾಶವಿರುತ್ತದೆ. ಅಡುಗೆಯ ಹೊಗೆ ಹೊರಹೋಗಲು ಒಲೆಯ ಮೇಲ್ಬದಿಯಲ್ಲಿ ಉಸಾಳಿಗಳಿರುತ್ತವೆ. ಅಡುಗೆ ಮನೆಯಲ್ಲಿ ಒಂದು ಕಡೆ ಕಂಬನೆಟ್ಟು, ಅದಕ್ಕೆ ಹಗ್ಗ ಹಾಕಿ ಮೊಸರು ಕಡೆಯುತ್ತಾರೆ. ಈ ಕಂಬಕ್ಕೆ ಪೂಜೆಸಲ್ಲುವುದುಂಟು. ಅಡುಗೆ ಮನೆ ಅಥವಾ ನಡುಮನೆಗೆ ಹೆಚ್ಚು ಪ್ರತ್ಯೇಕ ದೇವರ ಕೋಣೆಯಿರುವುದುಂಟು. ಇಲ್ಲಿ ದೇವರು ಜಗುಲಿಯಿರುತ್ತದೆ. ಇದು ಸುಮಾರು ನಾಲ್ಕು ಅಡಿ ಎತ್ತರವಾಗಿದ್ದು ಚೌಕಾಕಾರದಲ್ಲಿರುತ್ತದೆ. ಗಂಟೆ, ಧೂಪಾರ್ತಿ, ಮನೆ ದೇವರ ಪೋಟೋ. ಹಿರಿಯರ ಬೆಳ್ಳಿಯ 'ಮಕ'ಗಳು ಮುಂತಾದ ಮೂರ್ತಿಗಳಲ್ಲದೆ, ವಿವಿಧ ಬಗೆಯ ಪೂಜಾ ಸಾಮಾಗ್ರಿಗಳು ಜಗುಲಿಯ ಮೇಲಿರುತ್ತೇವೆ. ಸ್ಥಳಾವಕಾಶವಿಲ್ಲದ ಕೆಲವರು ದೇವರ ಕೋಣೆಯೆಂದು ಪ್ರತ್ಯೇಕ ಕಟ್ಟದೆ ಅಡುಗೆಯ ಮನೆಯ ಒಂದು ಮಾಡಿನಲ್ಲಿಯೂ ದೇವರನ್ನು ಪ್ರತಿಷ್ಠಾಪಿಸಬಹುದು.

ದೇವರಮನೆ ಅಥವಾ ಅಡಗೆಮನೆಯ ಒಂದು ಕಡೆ ಅಡಕಲು ಗಡಿಗೆಯ ಸಾಲುಂಟು ಇವುಗಳಲ್ಲಿ ಅಕ್ಕಡಿಕಾಳನ್ನೋ ಸ್ವಾವಗಿಯನ್ನೊ ಶೇಖರಿಸಿ ಇಡುವುದಿದೆ.

ಉಜ್ಜಿನಿಯ ಎಲ್ಲ ಮನೆಗಳು ಹೀಗೆಯೇ ಇವೆಯೆಂದಲ್ಲ. ಕೃಷಿ ಪ್ರಧಾನವಾದ ಈ ಊರಿನ ಬಹಳಷ್ಟು ಮನೆಗಳಲ್ಲಿ ದನದ ಹಕ್ಕೆಗಳಿವೆ. ತರುವಾಯ ಪಡಸಾಲಿ, ಅಡುಗೆ ಮನೆ ಅವಶ್ಯಕ. ಇನ್ನೂ ಆಯಾ ಕುಟುಂಬದವರ ಗಾತ್ರ, ಸೌಕರ್ಯಗಳನ್ನವಲಂಬಿಸಿ ದೇವರ ಕೋಣೆ. ನಡುಮನೆ, ಒಳಕೋಣೆಗಳು, ಹಿತ್ತಲು-ಇವೆಲ್ಲ ಇರಬಹುದು, ಇರಲಿಕ್ಕಿಲ್ಲ.

ಅಧುನಿಕ ಕಾಲಮಾನವನ್ನನುಸರಿಸಿ ಇಂದು ಉಜ್ಜಿನಿ ಮನೆಗಳ ಸ್ವರೂಪದಲ್ಲಿ ಸಾಕಷ್ಟು ಬದಲಾವಣೆಗಳಾಗುತ್ತಿವೆ. ಅನುಕೂಲವಿದ್ದವರು ಆರ್.ಸಿ.ಸಿ. ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದಾರೆ. ಇಂಥ ಮನೆಗಳಲ್ಲಿ ಪ್ರತ್ಯೇಕ ಸ್ನಾನದ ಕೋಣೆಯಿದೆ. ಡೈನಿಂಗ್ ಟೇಬಲ್ ಮೇಲೆ ಊಟಮಾಡುವ ವ್ಯವಸ್ಥೆಯಿದೆ. ಇಂದು ಕೆಲವು ಮನೆಗಳಲ್ಲಿ ಮಾತ್ರ ವಿಶೇಷವೆನಿಸುವ ಈ ವ್ಯವಸ್ಥೆ ನಾಗರಿಕತೆ ಬೆಳೆದಂತೆ ಉಜ್ಜಿನಿಯ ಎಲ್ಲ ಮನೆಗಳನ್ನೂ ವ್ಯಾಪಿಸಲೂಬಹುದು.

**ಊಟೋಪಚಾರ :** ಆಯಾ ಪ್ರದೇಶದ ಭೌಗೋಳಿಕ ಪರಿಸರ ಊಟೋಪಚಾರವನ್ನು ನಿಯಂತ್ರಿಸುತ್ತದೆ. ಈ ಭಾಗದ ಹಳ್ಳಿಯ ಜನ ತಮ್ಮ ಆಹಾರ ಪದಾರ್ಥಗಳಿಗೆ ಬೇಕಾಗುವ ಕಾಳು ಕಡ್ಡಿಗೆ ತಮ್ಮ ಹೊಲೆಗಳನ್ನೇ ಅವಲಂಬಿಸಿದ್ದಾರೆ. ಇದಕ್ಕೆ ಉಜ್ಜೈನಿಯೂ ಹೊರತಾಗಿಲ್ಲ. ಇವರ ಊಟದ ರೀತಿ ನಿತ್ಯ ಜೀವನ ಮತ್ತು ಹಬ್ಬ ಹರಿದಿನಗಳಲ್ಲಿ ಬೇರೆ ಬೇರೆಯಾಗಿರುತ್ತದೆ.

ನಿತ್ಯದ ಊಟಕ್ಕೆ ರೊಟ್ಟಿಬೇಕು. ಕೋಣಗಿಯಲ್ಲಿ ಬೀಸಿ ನೀರಿನಿಂದ ಜೋಳದ ಹಿಟ್ಟು ಕಲಿಸಿ ಸಣ್ಣ ಸಣ್ಣ ಉಳ್ಳಿ ಮಾಡಿಕೊಂಡು ಚಕ್ರಾಕೃತಿಯಲ್ಲಿ ಅದನ್ನು ಬಡಿಯಲಾಗುತ್ತದೆ. ತರುವಾಯ ಇವನ್ನು ಬಡೆಬಡೆದಂತೆ ಒಲೆಯ ಮೇಲಿನ ಹಂಚುವಿನಲ್ಲಿ ಹಾಕಿ ಬೇಯಿಸಿ ರೊಟ್ಟಿ ತಯಾರಿಸಲಾಗುತ್ತದೆ. ರೊಟ್ಟಿಯೊಂದಿಗೆ ತಿನ್ನಲು ತೊಗರಿ, ಅಲಸಂದಿ, ಕಡ್ಲಿ, ಹುರುಳಿ ಮುಂತಾದ ಕಾಳಿನಪಲ್ಯ ಮಾಡುವುದಿದೆ. ತೊಗರಬೇಳೆ ಅಥವಾ ಕಡಲೆಬೆಳೆ ನೆನಸಿ ಒಗ್ಗರಣೆಕೊಟ್ಟು ತಯಾರಿಸುವ ಉದರ ಬ್ಯಾಳಿಪಲ್ಯ ತಿನ್ನಲು ಬಲು ರುಚಿಯಾಗಿರುತ್ತದೆ. ಬದನೆಕಾಯಿ, ಜವಳಿಕಾಯಿ, ಮೆಂತೆ, ರಾಜಗರಿ, ಮುಂತಾದ ಕಾಯಿಪಲ್ಲೆಗಳನ್ನೂ ರೊಟ್ಟಿಗೆ ಆಸೆರೆಯಾಗಿ ಬಳಸಲಾಗುತ್ತದೆ. ಉಪ್ಪಿನಕಾಯಿ, ಮೂಲಂಗಿ ಪಚಡಿ ಬದನೆಕಾಯಿ - ಇವೆಲ್ಲ ನಿತ್ಯದ ಊಟದ ರುಚಿಯನ್ನು ಹೆಚ್ಚಿಸಿಕೊಳ್ಳಲು ಬಳಸುವ ಪದಾರ್ಥಗಳು. ರೊಟ್ಟಿ ತಿಂದಾದ ಮೇಲೆ ಅನ್ನವನ್ನು ಊಟ ಮಾಡುತ್ತಾರೆ. ಇಲ್ಲಿ ಬಳಸುವ ತೊಗರಿಬೇಳೆಯ ಸಾರು ರೊಟ್ಟಿಗೂ ಬಳಸಬಹುದು. ಬಡವರ ಊಟಕ್ಕೆ ರೊಟ್ಟಿ, ಬ್ಯಾಳಿನುಚ್ಚುಗಳೇ ಆಸರೇ, ಅನುಕೂಲವಿದ್ದವರು ಹಾಲು, ಮೊಸರು, ಮಜ್ಜಿಗೆಗಳನ್ನು ಬಳಸುತ್ತಾರೆ. ಮೊಸರಿನ ಸಂಗಡ ಬಳ್ಳೊಳ್ಳಿಕಾರ ವಿಶೇಷವಾಗಿರುತ್ತದೆ. ಊಟಕ್ಕೆ ಈ ಹಿಂದೆ ಕಂಜಿನ ಗಂಗಾಳಗಳಿದ್ದವು., ಈಗ ಅವುಗಳ ಸ್ಥಾನವನ್ನು ಸ್ಟೀಲಿನ ತಾಟುಗಳು ಆಕ್ರಮಿಸಿಕೊಂಡಿವೆ. ಊಟದ ತಾಟನ್ನು ಎತ್ತರಕ್ಕೆ ಇಟ್ಟುಕೊಳ್ಳಲು ಅಡ್ಡಣಿಗಿ ಇಂದು ಕಾಣುತ್ತಿಲ್ಲ. ಹಿತ್ತಾಳೆಯ ಚೆರಿಗೆಗೆ ಬದಲು ಇಂದು ಸ್ಟೀಲಿನ ಚೆರಿಗೆಗಳು ಅಡುಗೆ ಮನೆಗೆ ಬಂದಿವೆ.

ಹಬ್ಬಗಳಲ್ಲಿ ಊಟಕ್ಕೆ ಹೋಳಿಗೆ ಸಾಮಾನ್ಯ ಸೆಂಡಿಗೆ, ಅಪ್ಪಳ, ಉಪ್ಪಿನ ಕಾಯಿಗಳು ಹಬ್ಬದ ಸಿಹಿ ಅಡುಗೆಯೊಂದಿಗಿರುವ ಸಾಮಾಗ್ರಿಗಳಾದರೆ ಅನ್ನಕ್ಕೆ ಕಟ್ಟಿನ ಸಾರುಬೇಕು. ಕೆಲವರು ಹುಗ್ಗಿ, ಮಾದ್ಲಿಗಳನ್ನು ಈ ಹಬ್ಬದ ದಿನಗಳಂದೆ ಮಾಡುವುದುಂಟು. ಕೆಲವು ಅಡುಗೆ ಪದಾರ್ಥಗಳು ಇಂತಿಂಥ ಹಬ್ಬಗಳಿಗೆಂದೇ ಪ್ರಸಿದ್ದಿಗೊಂಡಿದೆ. ತರತರದ ಉಂಡಿ, ಕರಚಿಕಾಯಿ, ಗಾರಗಿ, ಕೋಡುಬಳೆ, ಇವೆಲ್ಲ ಪಂಚಮಿಯ ವಿಶೇಷಗಳಾದರೆ, ಎಳ್ಳು ಹಚ್ಚಿದ ಸಜ್ಜಿರೊಟ್ಟಿ, ಪುಂಡಿಪಲ್ಯೆ, ಕುದಿಸಿದ ಹಸಿಮೇಣಸಿನಕಾಯಿ ಕಾರ, ಚಟ್ನಿ ಎಳ್ಳಮಾಸೆಯ ವಿಶೇಷಗಳು. ಇವುಗಳೊಂದಿಗೆ ಹೋಳಿಗೆ ಅಥವಾ ಹೊರಣಗಡಬು ಇದ್ದೇ ಇರುತ್ತದೆ. ಕಾರಹುಣ್ಣಿಮೆಗೆ ಹುರಕ್ಕಿ ಕರಚಿಕಾಯಿ ಮಾಡುವುದು ವಿಶೇಷ. ಪಂಚಮಿ ಹಬ್ಬಕ್ಕೆ ಅಳ್ಳು ಉಂಡಿ ಮಾಡಿ ಹೆಣ್ಣು ಮಕ್ಕಳಿಗೆ ಕಳುಹಿಸುವಂತೆ ಕಾರಹುಣ್ಣಿಮೆಗೆ ಕರ್ಚಿಕಾಯಿ ಕಳಿಸಿಕೊಡಲಾಗುತ್ತದೆ.

ಶ್ಯಾವಿಗೆ, ಗುಳಿಗೆ, ಸವಿತಿಬೀಜ, ಬೇಸಿಗೆಯಲ್ಲಿ ಮಾಡಿ ಅಡಕಲು ತುಂಬಿ ಇಡಲಾಗುವುದು. ಆ ವೇಳೆಯಲ್ಲಿ ಬಂದ ಬೀಗರಿಗೆ ವಿಶೇಷ ಅಡುಗೆ ಮಾಡುವ ಪ್ರಸಂಗ ಬಂದರೆ ಶ್ಯಾವಿಗೆ ಬಸಿಯಲಾಗುತ್ತದೆ. ಶ್ಯಾವಿಗೆಗೆ ಸಕ್ಕರೆ ಅಥವಾ ಬೆಲ್ಲ ಹಾಕಿ ಮೇಲೆ ಒಂದಿಷ್ಟು ತುಪ್ಪ ಸುರಿದುಬಿಟ್ಟರೆ ಬಂದ ಬೀಗರು ಬಲು ಸಂತೃಪ್ತಿ ಹೊಂದುತ್ತಾರೆ.

**ವೇಷಭೂಷಣ**

ಪುರುಷರು ಸಾಂಪ್ರದಾಯಿಕ ರೀತಿಯಲ್ಲಿ ಧೋತ್ರ ಉಟ್ಟು ಮೇಲೆ ಅಂಗಿ ಹಾಕಿ ತಲೆಗೆ ಟವಲ್ಲನ್ನು ಸುತ್ತುತ್ತಾರೆ. ಇತ್ತೀಚಿನ ದಿನಗಳಲ್ಲಿ ಮುದುಕರು ಮಾತ್ರ ಸುತ್ತಿಕೊಂಡಿರುತ್ತಾರೆ.

**ಪುರುಷರು**

ಹಬ್ಬದ ದಿನಗಳಲ್ಲಿ ಮದುವೆ, ಮುಂಜಿವೆ, ಸಂದರ್ಭಗಳಲ್ಲಿ ಪುರುಷರು ಇದ್ದುದರಲ್ಲ ಬೆಳೆಯುಳ್ಳ ಅಂಗಿಯನ್ನು ಇಸ್ತ್ರಿ ಮಾಡಿಸಿ ತೊಡುತ್ತಾರೆ. ಇಂಥ ಬೆಲೆಯುಳ್ಳ ಅಂಗಿ ಒಲಿಸುವುದು ವರ್ಷಕ್ಕೆ ಒಂದು. ಅದೇ ಸಂದರ್ಭಗಳಲ್ಲಿ ಇಂತ ಅಂಗಿಯಲ್ಲದೆ ಮಸರಾಯಿ ಪೆಂಚೆ ಉಟ್ಟು ಹೆಗಲಿಗೆ ಮೆಪ್ಪೆಲರನ್ನು ಹಾಕಿಕೊಂಡಿರುತ್ತಾರೆ.

**ಹೆಂಗಸರು**

ಹೆಣ್ಣು ಮಕ್ಕಳು ಜಾತ್ರೆ-ಓಕುಳಿಗಳಲ್ಲಿ ಇಳಕಲ್ಲು ಸೀರೆಯುಡುತ್ತಾರೆ. ಇವರು ತಮ್ಮ ಮದುವೆ ಜರಗುವ ಸಂದರ್ಭದಲ್ಲಿ ಹಾಗೂ ಗ್ರಾಮ ದೇವತೆಯ ಜಾತ್ರೆಯ ಸಂದರ್ಭದಲ್ಲಿ ಮಾತ್ರ ಇದು ಹೊರಬರುತ್ತದೆ. ಉಳಿದಂತೆ ಈ ಸೀರೆ ಅವರ ಖಾಸ ಟ್ರಂಕಿನಲ್ಲಿ ಜೀವಮಾನದುದ್ದಕ್ಕೂ ಭದ್ರವಾಗಿರುತ್ತದೆ.

ಆಭರಣಗಳ ವಿಷಯದಲ್ಲಿ ಹೆಣ್ಣು ಮಕ್ಕಳದೇ ಮೇಲುಗೈ, ಗುಳದಾಳಿ ಮೂಗುಬಟ್ಟು. ಒಂದು ಕಾಲಕ್ಕೆ ಎಕಸರ, ಗೆಜ್ಜೆ ಟಿಕ್ಕಿ ತೋಳಬಂದಿ, ಬುಗಡಿ, ತಾಲಾಕುಕಡ್ಡಿ ಹೆಣ್ಣುಮಕ್ಕಳು ತೊಡುವ ವಿಶೇಷ ಆಭರಣಗಳಾಗಿದ್ದವು. ಈಗ ಅವೆಲ್ಲ ಬೇರೆ ಸ್ವರೂಪ ತೊಟ್ಟಿವೆ. ಜೈನು, ಮಾಂಗಲ್ಯಸರ, ಚಪ್ಪೆಸರ, ನೆಕ್ಲೆಸ್ಸು, ಮುಂತಾದವುಗಳು ಹೆಚ್ಚಾಗಿವೆ. ಈಗ ಬಂಗಾರ ಬಳೆಯ ಮೋಹ ಬೆಳೆಯುತ್ತಿದೆ. ನಡುವಿಗೆ ಹಾಕಿಕೊಳ್ಳುತ್ತಿದ್ದ ಪೆಟ್ಟಿ ಅಥವಾ ಡಾಬು ಇಂದು ಕಣ್ಮರೆಯಾಗಿವೆ.

**ಕೃಷಿ**

ಒಕ್ಕಲುತನ ಉಜ್ಜಿನಿಯ ಪ್ರಧಾನ ಉದೋಗ. ಇಲ್ಲಿಯ ಒಕ್ಕಲುತನದ ರೀತಿಯನ್ನು ಮುಖ್ಯವಾಗಿ ಎರಡು ಬಗೆಯಾಗಿ ವಿಂಗಡಿಸಬಹುದು. ಒಂದು ಒಕ್ಕಲುತನಕ್ಕೆ ಸಂಬಂಧಿಸಿದ ಭೌತಿಕ ಕ್ರಮ. ಎರಡು ಒಕ್ಕುಲುತನಕ್ಕೆ ಸಂಬಂಧಿಸಿದ ಭಾವುಕ ಆಚರಣೆಗಳು ಈ ವ್ಯವಸಾಯದ ವಾರ್ಷಿಕ ಚಕ್ರದಲ್ಲಿ ಒಣಬೇಸಾಯ ಮತ್ತು ನೀರಾವರಿ ಎಂದು ಮತ್ತೆರಡು ಬಗೆಗಳು. ಈ ಎರಡು ಬಗೆಯ ವ್ಯವಸಾಯಕ್ಕೆ ಸಂಬಂಧಪಡುವ ಜಮೀನು ಉಜ್ಜಿನಿಯಲ್ಲಿದೆ. ಒಣ ಬೇಸಾಯದ ಒಂದು ಕೃಷಿ ವರ್ಷದಲ್ಲಿ ಮುಂಗಾರಿ ಮತ್ತು ಹಿಂಗಾರಿ ಎಂದು ಎರಡು ಅವಧಿಗಳಿವೆ. ನೀರಾವರಿ ಜಮೀನಿನಲ್ಲಿ ಮುಂಗಾರಿ ಪ್ರಶ್ನೆ ಬರುವುದಿಲ್ಲ. ಮುಂಗಾರಿಯ ಬೆಳೆಗಳನ್ನು ಹಿಂಗಾರಿಯಲ್ಲಿಯೂ ಹಿಂಗಾರಿ ಬೆಳೆಗಳನ್ನು, ಮುಂಗಾರಿಯಲ್ಲಿಯೂ ಬೆಳೆಯುವುದುಂಟು. ಅವರು ವರ್ಷಕ್ಕೆ ಮೂರು ಬೆಳೆಗಳನ್ನು ಬೆಳೆಯುವರು.




ಭೌತಿಕ ಕ್ರಮ

ಉಜ್ಜಿನಿಯಲ್ಲಿ ಒಣಬೇಸಾಯದ ಜಮೀನು ಅಧಿಕವಾಗಿರುವುದರಿಂದ ಇದಕ್ಕೆ ಸಂಬಂಧಿಸಿದ ಕೃಷಿ ಪದ್ಧತಿ ಹೆಚ್ಚು ಸಂಕೀರ್ಣವೂ ಆಗಿರುವುದರಿಂದ ಅದನ್ನು ಹೆಚ್ಚು ವಿಸ್ತರಿಸಲಾಗಿದೆ. ಮುಂಗಾರಿನ ಅವಧಿಯೊಂದಿಗೆ ಒಣಬೇಸಾಯದ ಚಟುವಟಿಕೆಗಳು ಮೊದಲಾಗುತ್ತವೆ.

ಮುಂಗಾರಿ

ಬೇಸಗಿಯಲ್ಲಿ ಕೂಲಿ ಅಂದರೆ ಕೊಯ್ದ ಪೈರಿನ ಉಳಿದ ಕುಳೆವು ಆರಿಸುವುದು, ಗೊಬ್ಬರ ಹಾಕುವುದರೊಂದಿಗೆ ಮುಂಗಾರಿ ಅವಧಿಯ ಕೆಲಸಗಳು ಪ್ರಾರಂಭಗೊಳ್ಳುತ್ತವೆ.

ಗೊಬ್ಬರ ಹಾಕುವುದು

ವರ್ಷದ ಉದ್ದಕ್ಕೂ ತಿಪ್ಪೆಯಲ್ಲಿ ಸಂಗ್ರಹಗೊಂಡ ಗೊಬ್ಬರವನ್ನು ತಟ್ಟಿಕಟ್ಟಿದ ಚಕ್ಕಡಿಗಳಲ್ಲಿ ತುಂಬಿ ಹೊಲಕ್ಕೊಯ್ದು, ಅಲ್ಲಲ್ಲಿ ಗುಂಪಿ ಹಾಕಲಾಗುತ್ತದೆ. ಕೆಲದಿನಗಳ ತರುವಾಯ ಈ ಗುಂಡಿಗಳನ್ನು ಒಡೆದು ಗೊಬ್ಬರವನ್ನು ಹೊಲದ ತುಂಬ ಹರವಲಾಗುತ್ತದೆ.

ಉಳುಮೆ

ಭೂಮಿಯನ್ನು ಹದ ಮಾಡಲು ಹರಗುವುದು, ರಂಟೆ ಹೊಡೆಯುವುದು, ಇವೆಲ್ಲ ಒಂದಾದ ಮೇಲೆ ಒಂದರಂತೆ ನಡೆಯುತ್ತವೆ. ಸಾಮಾನ್ಯವಾಗಿ ರೋಹಿಣಿ ಮೊದಲು ಮಳೆಗೆ ಎರಡು ಬಾರಿ ಹರಗುತ್ತಾರೆ. ಮಳೆಯಾದ ಮೇಲೆ ರಂಟೆ ಹೊಡೆದು ಮತ್ತೊಮ್ಮೆ ಹರಗಿ ಮತ್ತೆ ಮಳೆಯ ದಾರಿ ಕಾಯುತ್ತಾರೆ. ಹೊಲಕ್ಕೆ ಕರಿಕೆ, ಜೇಕು ಹತ್ತಿದ್ದರೆ ನಾಲ್ಕೆತ್ತಿನ, ಆರೆತ್ತಿನ ಎಂಟೆತ್ತಿನ ನೇಗಿಲುಹೊಡಿ ಹಸನು ಮಾಡುತ್ತಾರೆ. ಒಡ್ಡಿನ ಬದಿಯಲ್ಲಿ ಕರಿಕೆ ಬೆಳೆದಿದ್ದರೆ ನೆಟ್ಟು ಕಡಿದು ಸ್ವಚ್ಛ ಗೊಳಿಸಲಾಗುತ್ತದೆ.

ಸಾಮಾನ್ಯವಾಗಿ ಭೂಮಿ ಹದ ಮಾಡುವ ಕೆಲಸ ಹೊತ್ತು ಮೂಡುವುದರೊಂದಿಗೆ ಪ್ರಾರಂಭಗೊಂಡು ಮಧ್ಯಾಹ್ನದ ಹೊತ್ತಿಗೆ ಮುಕ್ತಾಯಗೊಳ್ಳುತ್ತದೆ. ಬೇಸಿಗೆಯಲ್ಲಿ ಈ ಕೆಲಸ ನಡೆಯುವುದರಿಂದ ಎತ್ತುಗಳಿಗೆ

ಅಥವಾ ತಮಗೆ ತೊಂದರೆಯಾಗಬಾರದೆಂದು ಕೃಷಿಕರು ಮಾಡಿಕೊಂಡ ಅನುಕೂಲವಿದು. ರಂಟೆ ಹೊಡೆಯುವುದು ಹರಗುವುದು ನೇಗಿಲು ಹೊಡೆಯುವುದು ಯಾವುದೇ ಇರಲಿ, ಇದೆಲ್ಲ ಬ್ಯಾಸಗಿ 'ಗಳೆ' ಎನ್ನಿಸಿಕೊಳ್ಳುತ್ತವೆ. ಬೇಸಿಗೆಯ 'ಗಳೇವು' ಸಂದರ್ಭದಲ್ಲಿಯೇ ಮಧ್ಯಾಹ್ನದ ಮೇಲೆ ರೈತರು ಮನೆಯ ಮುಂದೆ ಹಗ್ಗ ಹೊಸೆಯುತ್ತಾರೆ. ವರ್ಷವಿಡೀ ಬೇಕಾಗುವ ಗುದ್ದಿ ಹಗ್ಗ, ಹಣೆ ಹಗ್ಗ ಮೇಲ್ಪಗ್ಗ ಹಿಡಿಯಗ್ಗ ಮುಂತಾದವುಗಳನ್ನು ತಯಾರಿಸಿಕೊಳ್ಳಲು ಮಧ್ಯಾಹ್ನದ ಈ ಬಿಡುವಿನ ವೇಳೆಯೇ ಯೋಗ್ಯವಾದುದು.

ಒಕ್ಕಲುತನಕ್ಕೆ ಬೇಕಾಗುವ ಎಲ್ಲಾ ಸಲಕರಣೆಗಳನ್ನು ತಯಾರಿಸಿ ಕಾರ ಹುಣ್ಣಿಮೆಯಲ್ಲಿ ಬೇರೆ ಬೇರೆ ಬಣ್ಣ ಎದ್ದುತ್ತಾರೆ. ಕಾರಹುಣ್ಣಿಮೆಯ ಸಮಯದಲ್ಲಿ ಬಗೆಬಗೆಯ ಹಗ್ಗ, ಕಣ್ಣಿ, ಹೊಟ್ಟು ತುಂಬವ ಜಾಳಿಗೆ ಮುಂತಾದವನ್ನೆ ತಯಾರಿಸಿಕೊಳ್ಳುತ್ತಿದ್ದರು. ಈಗ ಕಾಲ ಬದಲಾಗಿದೆ. ಸರಕಾರೀ ಗೊಬ್ಬರ ಚೀಲಗಳನ್ನೇ ಹರಿದು ಹೊಂದಿಸಿ ಹೊಲೆದುಕೊಂಡು ದೊಡ್ಡ ದೊಡ್ಡ ಪಾಟುಗಳನ್ನಾಗಿ ಮಾಡಿಕೊಂಡು, ಕೃಷಿಯ ಕೆಲಸಕ್ಕೆ ಬಳಸಿಕೊಳ್ಳುತ್ತಾರೆ.

### ಬಿತ್ತನೆ

ಮುಂಗಾರಿನ ಬಿತ್ತನೆ. ಸಾಮಾನ್ಯವಾಗಿ ರೋಹಿಣಿ ಮಳೆಯಿಂದ ಪ್ರಾರಂಭಗೊಳ್ಳುತ್ತದೆ. ರೋಹಿಣಿ ಮಳೆಗೆ ಸ್ವಲ್ಪ ಮುಂಚೆ ಬೇಕಾಗುವ ಬೀಜದ ವ್ಯವಸ್ಥೆಯನ್ನು ರೈತರು ಮಾಡಿಕೊಳ್ಳುತ್ತಾರೆ. ಸೆಂಗಾ ಅಕ್ಕಡಿಕಾಳಿನ ವ್ಯವಸ್ಥೆ ಮಾಡಿಕೊಳ್ಳುತ್ತಾರೆ. ಮುಂಗಾರಿ ಬಿತ್ತನೆಗೆ ಮೊದಲು ಕೂರಿಗೆ ಪೂಜೆಯಾಗುತ್ತದೆ. ಪ್ರಾರಂಭದಲ್ಲಿ ಏನೇ ಬಿತ್ತಲಿ ಆ ಬೀಜದಲ್ಲಿ ಒಂದಿಷ್ಟು ಮಣ್ಣು ಮತ್ತು ಸಾಸವಿ ಬೆರಸಬೇಕೆನ್ನುವುದು ಇಲ್ಲಿಯ ಒಂದು ನಂಬಿಕೆ. ಉಜ್ಜಿನಿಯಲ್ಲಿ ಕುರುಬರು ಮೊದಲು ಬಿತ್ತದ ಮೇಲೆಯೇ ಉಳಿದವರು ಬಿತ್ತನೆಗೆ ತೊಡುಗುತ್ತಿದ್ದರು. ಆದರೆ ಅದು ಇಂದು ಕಣ್ಣಿಂದ ಮರೆಯಾಗುತ್ತಿದೆ. ಜೋಳವನ್ನು ಕೂರಿಗೆಗೆ ಸಡ್ಡೆಕಟ್ಟಿ, ಸಡ್ಡೆಯ ಮುಖಾಂತರ ಬೀಜ ಬಿಟ್ಟು ಬಿತ್ತಲಾಗುತ್ತದೆ. ಅಕ್ಕಡಿಕಾಳನ್ನು ಕೂರಿಗೆಯ ಹಿಂದಿನಿಂದ ಸಡ್ಡೆಯ ಮೂಲಕ ಬಿತ್ತಲಾಗುತ್ತದೆ. ಅಕ್ಕಡಿ ಹಾಕುವವರೂ ನಡುವಿಗೆ ಹುಡಿಚೀಲ ಕಟ್ಟಿಕೊಂಡು, ಅದರಲ್ಲಿ ಕಾಳು ಸಂಗ್ರಹಿಸಿರುತ್ತಾರೆ. ಮುಂದೆ ಕೂರಿಗೆ ಹೋಗುತ್ತಿದ್ದಂತೆ ಹಿಂದೆ ಬೆಳೆಸಾಲು ಹೊಡೆದು ಕಾಳು ಚೆನ್ನಾಗಿ ಮುಚ್ಚುವಂತೆ ಮಾಡಲಾಗುತ್ತದೆ.

### ಎಡೆ ಹೊಡೆಯುವುದು

ಬಿತ್ತಿದ ಬೀಜ ಮೊಳಕೆಯೊಡೆದು ಬೆಳೆಯುತ್ತ ಹೋದಂತೆ ಆ ಬೆಳೆಯ ಸುತ್ತಮುತ್ತ ಬಗೆ ಬಗೆಯ ಕಸಗಳೇಳುತ್ತೇವೆ. ಈ ಕಸವನ್ನು ಸ್ವಚ್ಛ ಮಾಡದಿದ್ದರೆ, ಬೆಳೆಯ ಸತ್ವವನ್ನು ಕಸವೇ ಹೀರಿ ಬೆಳೆಯು ಚೆನ್ನಾಗಿ ಬಾರದ ಹಾಗೆ ಆಗುತ್ತದೆ. ಆದ್ದರಿಂದ ಎಡೆ ಹೊಡೆಯುವುದರ ಮೂಲಕ ಬೆಳೆಯ ಸುತ್ತಲಿನ ಕಸವನ್ನು ಸ್ವಚ್ಛ ಮಾಡುವದು ಒಂದು ಕ್ರಮ. ಎಡೆಯಲ್ಲಿ ಎರಡು ಬಗೆ. ಎಡೆಯ ದಿಂಡಿಗೆ ಕಬ್ಬಿಣದ ಎರಡು ತಾಳ ಸಿಕ್ಕಿಸಿ ನಡುವಿನ ಪೊಳ್ಳಿನಲ್ಲಿ ಸಸಿ ಬರುವಂತೆ ಹೊಡೆಯುವುದು ಒಂದು ಕ್ರಮವಾದರೆ

ಬೆಳೆಯ ಎರಡು ಸಾಲಿನ ಮಧ್ಯೆ ಎಡೆ ಹೊಡೆಯುವುದು ಇನ್ನೊಂದು ಕ್ರಮ. ಎರಡನೆಯದಕ್ಕೆ ಡುಮ್ಮಗುಂಟಿ ಎಂದು ಕರೆಯುವುಂಟು.

ಎಡೆ ಹೊಡೆಯುವುದಲ್ಲದೇ ಕೈಯಿಂದಲೂ ಕಳೆಕಿತ್ತು ಸ್ವಚ್ಛಗೊಳಿಸುವ ಕ್ರಮವೂ ಇನ್ನೊಂದಿದೆ. ಬಿತ್ತಿದ ಮೇಲೆ ವಿಪರೀತ ಮಳೆಯಾದರೆ ಹೊಲದ ತುಂಬ ಅದಿಕ ಪ್ರಮಾಣದಲ್ಲಿ ಬೆಳೆಯುವ ಕಸವನ್ನು ಆಳು ಹಚ್ಚಿ ಸ್ವಚ್ಛ ಮಾಡುವುದಿದೆ. ಕಸ ತೆಗೆಯುವವರು ಕೈಯಲ್ಲಿ ಕುರ್ಜಗಿ ಹಿಡಿದು ಕೆಲಸ ಮಾಡುತ್ತಾರೆ.

ಕೊಯ್ಯೂವುದು

ಮುಂಗಾರಿ ಜೋಳ ಮಾಗಿ ಬಂದಂತೆ ಕೊಯ್ಯಲು ಪ್ರಾರಂಭಿಸುತ್ತಾರೆ. ಬೆಳೆಯನ್ನು ಕುಡುಗೋಲಿನಿಂದ ಕೊಯ್ಯುತ್ತ ಸೂಡುಕಟ್ಟಿ ೫-೬ ಸೂಡಿಗೊಂದರಂತೆ ಅಲ್ಲಲ್ಲಿ ಮೆದೆಗಳನ್ನು ಒಟ್ಟಲಾಗುತ್ತದೆ. ಈ ಮೆದೆಗಳನ್ನು ಹೊಲದಲ್ಲಿ ಒಂದೆರಡು ಕಡೆ ಸಂಗ್ರಹಿಸಿ ಗೂಡು ಅಥವಾ ಚಾಪು ಹಾಕಿ ಒಟ್ಟಲಾಗುತ್ತದೆ. ಗೂಡು ಶಂಕುವಿನಾಕೃತಿಯಲ್ಲಿದ್ದು ಮೇಲ್ಬದಿ ತೆನೆಯಾಗಿರುವಂತೆ ಒಟ್ಟಲಾಗುತ್ತದೆ. ಚಾಪು ಆಯತಾಕಾರದಲ್ಲಿದ್ದು. ತೆನೆಗಳು ಎದುರು ಬದರಾಗುವಂತೆ ಎರಡು ಸಾಲಾಗಿ ಒಟ್ಟಲಾಗುತ್ತದೆ.

ಕಣ

ಕೊಯ್ಯುವುದು ನಡೆದಿರುವಂತೆಯೇ ಊರ ಸಮೀಪದ ಹೊಲದಲ್ಲಿ ಅಥವಾ ಕಣಕೆಂದೆ ಮೀಸಲಿಟ್ಟ ಸ್ಥಲದಲ್ಲಿ ಕಣ ಮಾಡಲಾಗುತ್ತದೆ. ಭೂಮಿಯನ್ನೇ ದುಂಡಗೆ ಸ್ವಲ್ಪ ಅಗಿದು ನೆಲವನ್ನು ಗಟ್ಟಿ ಮಾಡಿಕೊಂಡು ನಡುವೆ ಮೇಟಿಯನ್ನು ಹುಗಿಯಲಾಗುತ್ತದೆ. ಮೇಟಿ ಹುಗಿದ ಮೇಲೆ ಮೇಟಿಯ ಸುತ್ತಲೂ ಜೋಡಿಕಟ್ಟಿ ದನಗಳನ್ನು ತಿರುಗಿಸಿ ಸೆಗಣಿ, ನೀರು ಚಿಮುಕಿಸಿ ಕಣದ ನೆಲವನ್ನು ಗಟ್ಟಿ ಮಾಡಲಾಗುತ್ತದೆ. ತಮ್ಮ ಒಕ್ಕಲಿನ ಪ್ರಮಾಣಕ್ಕೆ ತಕ್ಕಂತೆ ಈ ಕಣದ ಅಳತೆಯನ್ನು ನಿರ್ಮಿಸಿಕೊಳ್ಳುತ್ತಾರೆ.

ತೆನೆ ಮುರಿಯುವುದು

ಈಗಾಗಲೇ ಗೂಡು ಹಾಕಿದ ಅಥವಾ ತೆನೆ ಮೆದೆಹಾಕಿದ ಸ್ಥಳದ ಮಧ್ಯದಲ್ಲಿ ಗುಡಾರ ಅಥವಾ ತಾಡಪಲ್ಲು ಹಾಸಿ ತೆನೆ ಮುರಿಯಲಾಗುತ್ತದೆ. ಸಣ್ಣ ಸಣ್ಣ ಕುಡುಗೋಲಿನ ಮುಖಾಂತರ ಹೆಚ್ಚಾಗಿ ಹೆಣ್ಣು ಮಕ್ಕಳೆ ಈ ಕಾರ್ಯ ನಿರ್ವಹಿಸುತ್ತಾರೆ. ತೆನೆ ಗಣಿಕೆಯನ್ನು ಅವರ ಮುಂದೆ ಹಾಕುತ್ತ ಹೋದಂತೆ ಹೆಣ್ಣು ಮಕ್ಕಳು ತೆನೆಗಣಿಕೆಯಿಂದ ತೆನೆಯನ್ನು ಬೇರ್ಪಡಿಸಿ ಗುಡಾರದ ಮಧ್ಯದಲ್ಲಿ ತೆನೆಗಳನ್ನು ಸಂಗ್ರಹಿಸಲಾಗುತ್ತದೆ. ತೆನೆ ಮುರಿದ ಮೇಲೆ ಉಳಿಯುವ ಒಣದಂಟು, ಮಂಡಗಣಿಕಿ ಎನ್ನಿಸಿಕೊಳ್ಳುತ್ತದೆ. ಇದನ್ನು ಮತ್ತೆ ಮೆದೆಹಾಕಿ ಒಟ್ಟಲಾಗುತ್ತದೆ. ತೆನೆಯನ್ನು ಕಣದ ದಂಡೆಯ ಇಕ್ಕುಲಿ ಮನೆಗೆ ತಂದು ಹಾಕಲಾಗುತ್ತದೆ. ಈ ಇಕ್ಕೆಲಿ ಮನೆಯೇ ರಾಶಿ ನಡೆಯುತ್ತಿರುವಂತೆ ಕಂಕಿ ಮನೆಯಾಗುತ್ತದೆ.

ರಾಶಿ ಮಾಡುವುದು

ಬೇರೆ ಬೇರೆ ಹೊಲಗಳಲ್ಲಿ ಸಂಗ್ರಹಗೊಂಡ ತೆನೆಯನ್ನು ಕಣಕ್ಕೆ ತಂದು ಸುರವಲಾಗುತ್ತದೆ. ತೆನೆಯನ್ನು

ಮೇಟಿಯ ಸುತ್ತಲೂ ಎಳೆದು ಕಣದ ಸುತ್ತಲು ಕಣಿಕೆಯ ಹೊರೆಗಳನ್ನು ಜೋಡಿಸಿ ಇಂಡಿಗಿ ಕಟ್ಟಲಾಗುತ್ತದೆ. ಮುಹೋರ್ತ ನೋಡಿ ರಾಶಿಯ ದಿನವನ್ನು ನಿಶ್ಚಯ್ರ ಪಡಿಸಿಕೊಂಡು ಸಂಜೆಯಾಗುತ್ತಿದಂತೆ ಹಂತಿ ಕಟ್ಟುಲಾಗುತ್ತದೆ. ಹಂತಿ ಕಟ್ಟಲು ತಮ್ಮ ಎತ್ತುಗಳಷ್ಟೇ ಸಾಲುವುದಿಲ್ಲವಾದ್ದರಿಂದ ಬೇರೆಯವರ ಎತ್ತುಗಳನ್ನು ತರೆಲಾಗುತ್ತದೆ. ಅಥವಾ ಬೇರೆಯವರು ಸ್ವ ಪ್ರೇರಣೆಯಿಂದಲೇ ತಮ್ಮ ಎತ್ತುಗಳೊಂದಿಗೆ ಬರುತ್ತಾರೆ. ಹಂತಿ ಕಣ್ಣಿಯಿಂದ ಎತ್ತುಗಳನ್ನು ಬಂಧಿಸಿ ಎರಡು ಮೂರು ಸರಮಾಡಿ ಮೇಟಿಗೆ ಕಟ್ಟಲಾಗುತ್ತದೆ. ಮೇಟಿಯ ಸುತ್ತಲೂ ಎತ್ತುಗಳು ತಿರುಗುತ್ತ ಹೋದಂತೆ ತೆನೆ ಸುರಿದು ಕಾಳು ಬೇರ್ಪಡುತ್ತವೆ. ಹೀಗೆ ಕಾಳು ಬೇರ್ಪಟ್ಟಂತೆ ಉಳಿಯುವ ಕಂಕಿಯನ್ನು ಕಣದ ಒಂದು ಬದಿಯಲ್ಲಿ ಸಂಗ್ರಹಿಸುತ್ತ ಹೋಗುತ್ತಾರೆ. ಮುಂಜಾನೆಯ ಹೊತ್ತಿಗೆ ಹಂತಿ ಮುಗಿಸಿ ಹುಲಗಣ ಹರಿಯಲಾಗುತ್ತದೆ. ತರುವಾಯ ಸುಂಕ ಸಹಿತ ಕಾಳನ್ನು ಮೇಟಿಯ ಆಚೀಚೆ ಸರಿಸಿ ಮೆದೆ ಮಾಡಲಾಗುತ್ತದೆ. ಮಧ್ಯ ತೆರವಾದ ಕಣದ ಸ್ಥಳದಲ್ಲಿ ಮೆಟ್ಟಾಲಿಗೆ ನಿಲ್ಲಿಸಿ ಅದರ ಮೇಲೆ ಹತ್ತಿ ತೂರಲಾಗುತ್ತದೆ. ಸಂಜೆಗೆ ದಿನವೀಡಿ ತೂರಿ ಸಂಗ್ರಹಗೊಂಡ ಕಾಳನ್ನು ಮೇಟಿಗೆ ಒತ್ತಿ ಪೂಜೆ ಮಾಡಲಾಗುತ್ತದೆ. ಮರುದಿವಸ ಹೊತ್ತೇರುವದರಂದಿಗೆ ಚೀಲ ತುಂಬಿ ಚಕ್ಕಡಿಯಲ್ಲಿ ರಾಶಿ ಹೇರಿಕೊಂಡು ಸಂಭ್ರಮದಿಂದ ಮನೆಗೆ ತರಲಾಗುತ್ತದೆ. ಕಾಳು ತುಂಬಿದ ಈ ಚೀಲಗಳನ್ನು ಕೆಲವರು ಮನೆಯ ಪಡಸಾಲೆಯಲ್ಲಿ ಒಳಕೋಣೆಗಳಲ್ಲಿ ನಿಟ್ಟು ಹಚ್ಚುವುಂಟು. ಇನ್ನು ಕೆಲವರು ಸುರವಿ ಹಗೆ ಬಳತಾಗಳಲ್ಲಿ ತುಂಬುವುದುಂಟು.

ಅಕ್ಕಡಿ ಕಾಳಿನ ರಾಶಿ ಬೇರೆ ಬಗೆಯಾಗಿರುತ್ತದೆ. ಅಲಸಂದಿ, ಹೆಸರು, ಅವರಿಯಂಥ ಬಳ್ಳಿಗಳಿಂದ ಕಾಯಿ ಹರಿದು ಮನೆಗೆ ತಂದು ಕೊಡಲೆಯಿಂದ ಬಡಿದು ಕಾಳು ಉದುರಿಸಲಾಗುತ್ತದೆ. ತೊಗರಿಯನ್ನು ಕಣದಲ್ಲಿ ಬಡಿಗಿಯಿಂದ ಬಡಿದು ಕಾಳು ಉದುರಿಸಲಾಗುತ್ತದೆ. ಹುಳ್ಳಿಯನ್ನು ಹಂತಿ ಕಟ್ಟಿ ತುಳಿಸಿ ರಾಶಿ ಮಾಡಲಾಗುತ್ತದೆ. ನೆಟೆಸೆಂಗಾ ಬೆಳೆ ಮುಂಗಾರಿ ಹಂಗಾಮಿನಲ್ಲಿಯೇ ಬರುತ್ತದೆ. ಉಜ್ಜನಿಯ ಜಮೀನಿನಲ್ಲಿ ನೆಟಸೆಂಗಾ ವಿಶೇಷವಾಗಿ ಬೆಳೆಯುತ್ತದೆ. ಇದನ್ನು ಕೈಯಿಂದ ಕಿತ್ತು ಬಳ್ಳಿಯನ್ನು ಒಂದೆಡೆ ಒಟ್ಟಿ ತುರವಾಯ ಕಾಯಿ ಹರಿದು ಸಂಗ್ರಹಿಸಲಾಗುತ್ತದೆ. ಸೆಂಗಾ ಬಳ್ಳಿಯ ಹೊಟ್ಟನ್ನು ಮುಂಗಾರಿಯ ವಿಶೇಷತೆಯೆಸಿಸುತ್ತದೆ. ಉಜ್ಜಿನಿ ಒಂಗಾರಿಗೆ ಸಂಬಂಧಪಟ್ಟ ಭೂಮಿಯೇ ಹೆಚ್ಚಿಗಿರುವುದರಿಂದ ಮುಂಗಾರಿ ಪಸಲು ಸಾಕಷ್ಟು ಪ್ರಮಾಣದಲ್ಲಿ ಬರುವುದಿಲ್ಲ. ಈ ವಿಷಯದಲ್ಲಿ ಉಜ್ಜಿನಿ ಒಕ್ಕಲಿಗರು ಹಿಂಗಾರಿ ಬೆಳೆಗಳನ್ನೇ ಅವಲಂಬಿಸಿದ್ದಾರೆ.

ಹಿಂಗಾರಿ

ಹಿಂಗಾರಿಯ ಅವಧಿ ಮಗಿ ಮಳೆಯಿಂದ ಪ್ರಾರಂಭಗೊಳ್ಳುತ್ತದೆ. ಹಿಂಗಾರಿಯ ಭೂಮಿ ಉಳುಮೆ ಮುಂಗಾರಿ ಅವಧಿಯೊಂದಿಗೆ ಆಗಿದ್ದರೂ, ಈಗ ಮತ್ತೊಮ್ಮೆ ಹೊಲಗಳನ್ನು ಹರಗಿ ಹಸನು ಮಾಡಿಕೊಳ್ಳುವುದುಂಟು. ಮಗಿ ಮಳೆಗೆ ಹತ್ತಿಯನ್ನು ಬಿತ್ತಲಾಗುತ್ತದೆ. ಇತ್ತಿತ್ತಲಾಗಿ ಸೂರ್ಯಕಾಂತಿ, ತಂಬಾಕು, ಹೆಚ್ಚಾಗಿದೆ. ಉತ್ತರಿ-ಹಸ್ತ ಮಳೆಗೆ ಬಿಳಿಜೋಳವನ್ನು ಬಿತ್ತಲಾಗುತ್ತದೆ. ಮುಂಗಾರಿ ಜೋಳದಂತೆ ಬಿಳಿ ಜೋಳವನ್ನು ಕೂರಿಗೆ ಮುಖಾಂತರವೇ ಬಿತ್ತಲಾಗುವುದು. ಆದರೆ ಅಕ್ಕಡಿ ಕಾಳಿನ

ಪ್ರಮಾಣ ಮುಂಗಾರಿಯಲ್ಲಿದಷ್ಟು ಇಲ್ಲಿಲ್ಲ. ಬಿಳಿಜೋಳ ಮೊಳಕೆಯೊಡೆದು ಸಸಿಯಾಗಿ ಎತ್ತರಾಗುತ್ತಿದ್ದಂತೆ ಎಡೆ ಹೊಡೆಯುವುದು. ಕಸ ತೆಗೆಯುವುದು, ಮುಂತಾದ ಕೆಲಸಗಳು ಮುಂಗಾರಿ ಅವಧಿಯಲ್ಲಿದ್ದಂತೆಯೇ ನಡೆಯುತ್ತವೆ. ಹಿಂಗಾರಿಯ ಇನ್ನೊಂದು ಮುಖ್ಯ ಬೆಳೆ ದುಂಡುಗಡಲಿ, ಎರಿ, ಸಣ್ಣೆರಿ ರೈತರು. ಹತ್ತಿ ಬಿಳಿಜೋಳ ಬಿತ್ತಿದರೆ, ಕರಲು ಜಮೀನು ಇದ್ದರು ಅಲ್ಲಿ ಇಲ್ಲಿ ಸ್ವಲ್ಪ ಗೋಧಿಯನ್ನು ಬೆಳೆಯುತ್ತಾರೆ.

ಹಿಂಗಾರಿ ಬೆಳೆಗಳಲ್ಲಿ ಕೊನೆಯದು ಹತ್ತಿ, ಯಾವ ಕುತ್ತಿಗೂ ಸಿಗದ ಹತ್ತಿ ಒಡೆಯುತ್ತ ಹೋದರೆ ಯುಗಾದಿ-ದವನದ ಹುಣ್ಣಿಮೆಯವರೆಗೂ ಬಿಡಿಸಿಕೊಳ್ಳಬಹುದು. ಹತ್ತಿಯನ್ನು ಮೂರು ಕಂತಾಗಿ ಉಡಿಕಟ್ಟಿ ಬಿಡಿಸಿಕೊಳ್ಳಲಾಗುತ್ತದೆ. ಮೊದಲ ಬೀಡು, ಮರಿಬೀಡು, ಕಡಿಬೀಡು ಆಮೇಲೆ ಬಿಡಿಸಿಕೊಳ್ಳುವ ಹತ್ತಿ ಸಾಮಾನ್ಯವಾಗಿ ಸ್ವಚ್ಛವಿರುವುದಿಲ್ಲ. ಹಾಳ್ಹತ್ತಿ ಎನ್ನುತ್ತಾರೆ. ಹೀಗಾಗಿ ಕೃಷಿ ಕೆಲಸಗಳು ಮುಕ್ತಾಯ ಹೊಂದುತ್ತೇವೆ.

### ನೀರಾವರಿ

ಉಜ್ಜಿನಿ ಕ್ಷೇತ್ರದಲ್ಲಿ ನೀರಾವರಿ ಸಾಗುವಳಿ ಬಹಳ ಕಡಿಮೆ. ತೋಡಿದ ಬಾವಿಗಳಲ್ಲಿ ಕುಡಿಯಲು ನೀರು ಬೀಳುವುದುವಿ ಅಪರೂಪ. ಬೋರೆವೆಲ್‌ಗಳಿಗಿಂತ ಬೆದ್ದಲು ಕೃಷಿಯೇ ಹೆಚ್ಚು. ಆಧುನಿಕತೆ ಕಾಲಿಟ್ಟಂತೆ ಕೃಷಿಯಲ್ಲಿ ಸಾಕಷ್ಟು ಸುಧಾರಣೆಯಾಗಿದೆ. ಉಳುಮೆಗೆ ಟ್ರ್ಯಾಕ್ಟರ್, ಸರಕಾರಿ ಗೊಬ್ಬರ, ಸಂಸ್ಕರಣಗೊಂಡ ಬೀಜ, ಕಾಳನ್ನು ಮಾಡಲು ಕಷ್ಟ ಪಡಬೇಕಿಲ್ಲಿ ಅವಗಳಿಗೆ ಮಿಷನ್ ಇವೆಲ್ಲ ಆಧುನಿಕ ಕೊಡೆಗೆಗಳಾಗಿ ಎಲ್ಲಾ ಕಡೆಯಂತೆ ಉಜ್ಜಿನಿಯಲ್ಲಿಯೂ ಹೊಸಗಾಳಿ ಬೀಸಿದೆ.

### ವರ್ಣವ್ಯವಸ್ಥೆ

ಸಮಾಜದ ರಚನಾ ಸ್ವರೂಪವನ್ನು ಗಮನಿಸಿದಂತೆ ಉದ್ಯೋಗ ವರ್ಣಗಳೆರಡೂ ತಳಕು ಹಾಕಿಕೊಂಡಿವೆ. ಆದ್ದರಿಂದ ವರ್ಣ ವ್ಯವಸ್ಥೆಯೆಂಬುದನ್ನು ಕೃಷಿಕರು ಮತ್ತು ಕೃಷಿಕರನ್ನವಲಂಬಿಸಿದವರು ಎಂದು ಎರಡು ಗುಂಪಾಗಿ ವಿಂಗಡಿಸಿಕೊಂಡು ಅಭ್ಯಸಿಸುವುದು ವಿಹಿತವೆನಿಸುತ್ತದೆ.

### ಕೃಷಿಕರು

ಕೃಷಿಯನ್ನೇ ಪ್ರಧಾನ ಉದ್ಯೋಗವನ್ನಾಗಿ ಮಾಡಿಕೊಂಡವರಲ್ಲಿ ಲಿಂಗಾಯತರು, ಕುರಬರು, ನಾಯಕರು, ಹರಿಜನರು, ಚಲವಾದಿಗರು, ಬಾರಿಕರು, ಮುಖ್ಯರು ತೀರಾಗೆರೆ ಕೊರದಂತೆ ಇವೆರಲ್ಲ ಒಕ್ಕಲುತನವನ್ನೆ ಮಾಡುತ್ತಾರೆಂದು ಹೇಳಲಾಗುವುದಿಲ್ಲ. ವ್ಯಾಪಾರ, ಕುರಿಸಾಕಾಣಿಕೆ ಮುಂತಾದ ಅನ್ಯ ಉದ್ಯೋಗಗಳನ್ನೇ ಕೆಲವರು ಮಾಡಿದರೂ ಈ ಜಾತಿಯ ಬಹುಮಂದಿಯ ಉದ್ಯೋಗ ಒಕ್ಕಲುತನವೆಂಬುದನ್ನು ಹೇಳಬಹುದು. ಕೃಷಿಯನ್ನೆವಲಂಬಿಸಿರುವ ಇವರು ಸಹಜವಾಗಿ ತಾವು ಬೆಳೆದಿರುವ ಕಾಳು ಕಡಿ ಮೇವನ್ನು ಇತರ ಜಾತಿಯವರಿಗೆ ಕೊಟ್ಟು ತಮ್ಮ ಕೃಷಿ ಜೀವನಕ್ಕೆ ಬೇಕಾಗುವ ಅಗತ್ಯಗಳನ್ನು ಪೂರೈಸಿಕೊಳ್ಳುತ್ತಾರೆ. ಈ ಕೊಡಕೊಳ್ಳುವಿಕೆಯಲ್ಲಿ ಸಾಮಾನ್ಯವಾಗಿ ಅನುಕೂಲಸ್ಥರಂತೆ ಕಾಣುವವರು ಕೃಷಿಕರೇ ಎನ್ನಬೇಕು. ವಾಣಿಜ್ಯ ವೃತ್ತಿಯನ್ನು ಮಾಡುವವರು ಇವರಿಗಿಂತ

ಶ್ರೀಮಂತರಿರಬಹುದು. ಅದು ವ್ಯವಹಾರ ಮುಖ. ಇಲ್ಲಿ ಮುಖ್ಯವೆನಿಸುವುದು, ಪರಂಪರಾಗತವಾಗಿ ಹರಿದು ಬಂದಿರುವ ಸಹಕಾರ ಮತ್ತು ಆ ಸಹಕಾರದ ಮಧ್ಯವೇ ಒಡಮೂಡಿ ಬಂದಿರುವ ಗ್ರಾಮ ಸಂಘಟನೆ, ಈ ಸಹಕಾರ ಸಂಘಟನೆಗಳಿಂದಾಗಿಯೇ ಇಡೀ ಗ್ರಾಮ ಒಂದು ಘಟಕವಾಗಿ ತೋರುತ್ತದೆ.

ಕೃಷಿ ಸಂಪ್ರದಾಯ ಆಚರಣೆಗಳನ್ನು ಕುರಿತಾಗಿ ಈಗಾಗಲೇ ವಿವರವಾಗಿ ನೋಡಲಾಗಿದೆ. ಕೃಷಿ ಸಂಬಂಧದ ಈ ವಿವರಣೆ ಕೃಷಿಗೈಯುವ ಎಲ್ಲರಿಗೂ ಅನ್ವಯಿಸುತ್ತದೆ. ಇನ್ನು ಮುಂದೆ ನಾವು ಮುಖ್ಯವಾಗಿ ಗಮನಿಸಬೇಕಾಗುವುದು ಈ ಮತದವರ ಮತೀಯ ವಿಚಾರಗಳನ್ನು ಇಲ್ಲಿ ಸಂಶೋಧನ ದೃಷ್ಟಿಗಿಂತ ವಿವರಣಾತ್ಮಕ ರೀತಿಯನ್ನು ಮುಖ್ಯವಾಗಿಸಿರಿಸಿಕೊಂಡಿದೆ. ಒಂದೊಂದು ಮತದವರ ಮಾಹಿತಿಗಾಗಿ ಆಯಾಮತದವರ ಸಂದರ್ಶನಗಳನ್ನೇ ಮುಂದು ಮಾಡಿಕೊಂಡು ವಿವರಿಸಲಾಗಿದೆ.

**ಕುರುಬ ಜನಾಂಗ**

ಉಜ್ಜಿನಿಯಲ್ಲಿ ಕುರುಬ ಸಮಾಜವೇ ದೊಡ್ಡದು. ಕುರುಬರಲ್ಲಿ ಹತ್ತಿ ಕಂಕಣದವರು, ಉಣ್ಣೆ ಕಂಕಣದವರು ಎಂಬ ಎರಡು ಮುಖ್ಯ ಶಾಖೆಗಳು ಬರುತ್ತವೆ. ಮತ್ತೆ ಇವುಗಳಲ್ಲಿ ಬೇರೆ ಬೇರೆ ಬೆಡಗುಗಳುಂಟು ಸಂಬಂಧ ಬೆಳೆಯಿಸುವಾಗ ಕಂಕಣ ಮತ್ತು ಬೆಡಗುಗಳು ಮುಖ್ಯವಾಗಿ ಪರಿಗಣಿಸಲ್ಪಡುತ್ತವೆ. ಮೊದಲು ಕೇಳುವುದು ಕಂಕಣ. ಕಂಕಣ ಬೇರೆ ಬೇರೆಯಾಗಿದ್ದರೆ ಪರಸ್ಪರ ಬೀಗುತನ ಬೆಳೆಸುವುದು ಸಾಧ್ಯವಾಗುವುದಿಲ್ಲ. ಅಲ್ಲಿ ಮೇಲು ಕೀಳಿನ ತಾರತಮ್ಯವಿದೆ. ಆದ್ದರಿಂದ ಹತ್ತಿ ಕಂಕಣದವರು ಹತ್ತಿ ಕಂಕಣದಲ್ಲಿಯೇ ಸಂಬಂಧಗಳನ್ನು ಬೆಳೆಯಿಸಬೇಕು. ಉಣ್ಣೆ ಕಂಕಣದವರು ಉಣ್ಣೆ ಕಂಕಣದವರೊಂದಿಗೆ ಸಂಬಂಧ ಬೆಳೆಯಿಸಬೇಕು. ಇವರಿಬ್ಬರ ಅಂತರ ಮುಖ್ಯವಾಗಿ ಒಡೆದು ತೋರುವುದು ಮದುಮಕ್ಕಳಿಗೆ ಕೈಗೆ ನೂಲಿನ ಕಂಕಣ ಕಟ್ಟುತ್ತಾರೆ. ಎರಡನೆಯದಾಗಿ ಬೆಡಗು ಮುಖ್ಯವೆನಿಸುತ್ತದೆ. ಬೇರೆ ಬೇರೆ ಹೆಸರಿನ ಬೆಡಗುಗಳು ಎರಡು ಕಂಕಣಗಳಲ್ಲುಂಟು, ಬೆಡಗು ಬೇರೆಯಾದರೆ ಮಾತ್ರ ಬೀಗುತನ ಬೆಳೆಸಬಹುದು. ಒಂದೆಯಾದರೆ ಅಣ್ಣ ತಮ್ಮಂದಿರಾಗುತ್ತಾರೆ ಎಂಬ ನಂಬಿಕೆಯಿದೆ.

ಇವರ ಕುಲದೇವರು ಬೀರಪ್ಪನಿದ್ದರು. ಇವರು ಅನುಮಪ್ಪ, ಮರುಳಸಿದ್ದ, ಮೈಲಾರಲಿಂಗ ಎಲ್ಲ ದೇವರಲ್ಲಿಯೂ ನಂಬಿಕೆವುಳ್ಳ ನಿಷ್ಠವಂತ ಜನಾಂಗವಾಗಿದೆ. ಕುರುಬ ಸಮುದಾಯದಲ್ಲಿರುವ ಮದುವೆ ಸಂಪ್ರದಾಯಗಳೆ ಇಲ್ಲಿಯ ಕುರುಬ ಸಮಾಜದಲ್ಲಿವೆ. ಸಮಾಜದ ಪ್ರಮುಖರು ಸೇರಿ ಹೆಣ್ಣು ಕಾಯೆಂಬು ಮಾಡುವುದು. ಮದುವೆಯಲ್ಲಿ ಬೀಗರನ್ನು ಎದುರುಗೊಳ್ಳುವುದು. ಐರಣಿ ತರುವುದು. ಬಾಸಿಂಗ ತರುವುದು - ಇವೆಲ್ಲ ಮದುವೆಗೆ ಸಂಬಂಧಪಡುವ ಆಚರಣೆಗಳು. ಹಿಂದಿನ ಕಾಲದಲ್ಲಿ ಈ ಸಮಾಜದಲ್ಲಿ ಇದ್ದ ತೆರವು ತೆಗೆದುಕೊಳ್ಳುವ ಪದ್ಧತಿ ಈಗಿಲ್ಲ. ವರದಕ್ಷಿಣೆಯ ಗಾಢತೆ ಇನ್ನೂ ಅಷ್ಟಾಗಿಲ್ಲ. ಬಾಂಡಿ, ಬಂಗಾರ, ಮುಂತಾಗಿ ಕೊಡಲಾಗುತ್ತದೆ. ಎಲ್ಲೂ ಒಬ್ಬ ಇಬ್ಬರು ಓದಿದ ಯುವಕರು ಲಕ್ಷದ ಮಾತುಗಳನ್ನು ಮಾತನಾಡಿ ಪಡೆದುದುವುಂಟು. ಒಟ್ಟಾರೆ ವರೋಪಚಾರದ ಕಡೆಗೆ ಹೆಚ್ಚಿನ ಗಮನ ಕೊಡುವುದು ಬೆಳೆಯುತ್ತಿದೆ.

ಕೂಸು ಹುಟ್ಟಿದಾಗ ಕೂಸಿಗೆ ಹನ್ನೊಂದು ಅಥವಾ ಹದಿಮೂರನೆಯ ದಿನಕ್ಕೆ ಹೆಸರಿಡಲಾಗುತ್ತದೆ. ತೀರಿಕೊಂಡಾಗ ಹುಗಿಯುತ್ತಾರೆ. ತೀರಿಕೊಂಡ ವ್ಯಕ್ತಿಗೆ ತ್ಪನ್ (ಪಾಂಡುರೋಗ) ಬೆಂಕಿ ಹಚ್ಚಿ ಸುಡುತ್ತಾರೆ. ವ್ಯಕ್ತಿ ತೀರಿಕೊಂಡ ತಿಂಗಳೊಳಾಗಾಗಿ ಒಂದು ದಿನ ಸಿಹಿ ಅಡಿಗೆ ಮಾಡಿ ದೈವದೊಳಗೆ ತೆಗೆದುಕೊಳ್ಳುವ ಪದ್ಧತಿ ಇದೆ. ಕುರುಬ ಸಮಾಜ ಮತ್ತು ವಾಲ್ಮೀಕಿ ಸಮಾಜದ ಮತೀಯ ಆಚರಣೆಗಳಲ್ಲಿ ತುಂಬಾ ಹೋಲಿಕೆಗಳಿರುವುದು ಗಮನಾರ್ಹವಾದ ವಿಷಯ.

ಒಕ್ಕಲುತನ ಕುರಿಕಾಯುವುದು ಇವು ಇಲ್ಲಿಯ ಕುರುಬ ಸಮಾಜದವರ ಮುಖ್ಯ ಉದ್ಯೋಗಗಳು, ೧೦೦-೨೦೦ ಕುರಿಗಳನ್ನು ಮಾಡಿಕೊಂಡು ಕೆಲವರು ಜೀವನ ಸಾಗಿಸುತ್ತಾರೆ. ಕುರಿ ಮೇಸಲು ಚಿರುಭ ಅರಣ್ಯ, ಚಿಕ್ಕ ಉಜ್ಜಿನಿ ಗುಡ್ಡಗಳು ಅನುಕೂಲವಾಗಿದ್ದರೂ ಇತ್ತೀಚಿನ ಕಟ್ಟಳೆಗಳಿಂದ ಕುರಿಗಳನ್ನು ಮೇಯಿಸುವುದು ಕಷ್ಟವಾದರು ಜೀವನ ಹೇಗೋ ನಡೆಯುತ್ತದೆ. ಉಜ್ಜಿನಿ ಸುತ್ತಮುತ್ತಲ ಹಳ್ಳಿಗಳಿಗೆ ಮೇಯಿಸಿಕೊಂಡು ಬಂದು ರಾತ್ರಿಗೆ ಕುರಿಹಟ್ಟಿಗೆ ಕೂಡುತ್ತಾರೆ. ಕುರಿಯ ಹಾಲು ವ್ಯಾಪಾರ ಕಡಿಮೆ, ಮರಿಗೇ ಕುಡಿಸಿ ಬಿಡುವುದು ಹೆಚ್ಚು. ಕುರಿ ಹಿಂಡು ಬೆಳೆಯಿಸಿ ಅಡಚಣೆ ಇದ್ದಷ್ಟು ಮಾರುತ್ತ ಹೋಗುವುದೇ ಉಪಜೀವನದ ಮಾರ್ಗವೆನಿಸಿದೆ. ವರ್ಷಕ್ಕೊಮ್ಮೆ ಕೆರೆಯ ಉಣ್ಣೆ ಕತ್ತರಿಸಿ ಮಾರಲಾಗುವುದು. ಉಣ್ಣೆಯಿಂದ ಉತ್ತಮ ಮಟ್ಟದ ಕಂಬಳಿಯನ್ನು ಉಜ್ಜಿನಿಯಲ್ಲಿಯೇ ತಯಾರಿಸಲಾಗುವುದು ಎಂದು ಉಜ್ಜಿನಿ ನರಗಪ್ಪ ಹೇಳುತ್ತಾರೆ.

### ಲಿಂಗಾಯತರು

ಉಜ್ಜಿನಿಯಲ್ಲಿ ಲಿಂಗಾಯತರು ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿಂತಿರುವರು. ಅವರಲ್ಲೂ ಕೂಡ ಒಳ ಪಂಗಡಗಳಿವೆ. ಅವುಗಳೆಂದರೆ :

೧. ಶೀಲವಂತ ಬಣಜಿಗರು

೨. ಪಂಚಮ ಸಾಲಿಯವರು

೩. ಲೋಕ ಬಳಕಿಯವರು

೪. ಸಾದು ಲಿಂಗಾಯಿತರು

ಶೀಲವಂತ ಬಣಜಿಗರು, ಪಂಚಮಸಾಲಿಯವರು, ಲೋಕಬಳಕಿಯವರು ಈ ಹಿಂದೆ ಸಂಬಂಧಗಳು ನಡೆಯುತ್ತಿರಲಿಲ್ಲ. ಈಗ ನಡೆಯುತ್ತವೆ. ಆದರೆ ನಾಲ್ಕನೆ ಸಾದು ಲಿಂಗಾಯತರು ಇವರ ಜೊತೆ ಮದುವೆ ಆಗುವುದಿಲ್ಲ. ಇವರು ತಮ್ಮದೆ ಕುಲದಲ್ಲಿ ಮದುವೆಯಾಗುತ್ತಾರೆ. ಆದರೆ ಇವರ ಎಲ್ಲಾ ಆಚಾರ ವಿಚಾರಗಳು ಒಂದೇಯಾಗಿರುತ್ತೇವೆ. ಕೂಸು ಹುಟ್ಟಿದಾಗ ಹುಟ್ಟಿದ ಶಾಸ್ತ್ರ ಮಾಡಿ ೧೩ನೇ ದಿನಕ್ಕೆ ಹೆಸರು ನಾಮಕರಣಶಾಸ್ತ್ರ ಮಾಡುತ್ತಾರೆ. ಈ ಸಂದರ್ಭದಲ್ಲಿ ಕೂಸಿಗೆ ಅತ್ತೆಯಾದವಳನ್ನು ಕರೆಯಿಸಲಾಗುತ್ತದೆ. ಮೊದಲು ಸ್ವಾಮಿಗಳು ನಾಮಕರಣದ ತರುವಾಯ ಅತ್ತೆ ನಾಮಕರಣ ಮಾಡುತ್ತಾಳೆ. ಹೆಸರಿಡುವ ಹೊತ್ತಿಗೆ ಓಣಿಯ ಹೆಣ್ಣು ಮಕ್ಕಳನ್ನು, ಕರೆಯುವುದು ವಾಡಿಕೆ. ಅತ್ತಿ ಕೂಸಿನ ಕಿವಿಯಲ್ಲಿ ಹೆಸರು

ಊದುತ್ತಿರುವಂತೆ ಸುತ್ತೆ ನಿಂತವರು ಅವಳ ಬೆನ್ನ ಚಪ್ಪರಿಸುತ್ತಾರೆ. ಸೋದರತ್ತೆಯೊಬ್ಬಳೇ ಅಲ್ಲ. ಅತ್ತೆ ಸಂಬಂಧದ ಮತ್ತೆ ಕೆಲವರು ಕೂಸಿಗೆ ಹರೆಸರಿಡಬಹುದು. ಗುಗ್ಗರಿ ಈ ಸಂದರ್ಭದ ವಿಶೇಷತೆ. ಹೆಸರಿಟ್ಟ ಮೇಲೆ ಬಂದವರಿಗೆಲ್ಲ ಗುಗ್ಗರಿ ಹಂಚಲಾಗುತ್ತದೆ.

ಜನನ ಮದುವೆಯಂಥ ಸಂದರ್ಭಗಳ ಆಚರಣೆಗಳು ಎಷ್ಟೋ ಮರೆಯಾಗಿವೆ ಮತ್ತು ಬದಲಾಗಿವೆ. ಮುಂಚೆ ಇವೆಲ್ಲ ಹೇಗೆ ಸಾಗಬೇಕೆಂಬ ಕಟ್ಟುಪಾಡುಗಳಿದ್ದವು. ಈಗ ಯಾರು ಅಷ್ಟೊಂದು ತೀವ್ರವಾಗಿ ಪರಿಗಣಿಸುವುದಿಲ್ಲ. ಇವರಲ್ಲಿ ಶವವನ್ನು ಹೊಳುವ ಪದ್ಧತಿ ಇದೆ. ಇಲ್ಲಿರುವ ೪ ಜನಾಂಗ ಲಿಂಗಾಯಿತರಲ್ಲಿ ೩ ಬಣಜಿಗರು ಸ್ವಾಮಿಗಳನ್ನು ಕೆರೆಯಿಸಿಕೊಳುವಲ್ಲಿ ಯಾವುದೇ ಭೇದ ಭಾವವಿಲ್ಲ, ಜನನ, ಮದುವೆ, ಮರಣಗಳಂಥ ಸಂದರ್ಭಗಳಲ್ಲಿ ಸ್ವಾಮಿಗಳನ್ನು ಕರೆಯುಸುತ್ತಾರೆ. ಸಾದು ವೀರಶೈವರಲ್ಲಿ ಸ್ವಲ್ಪ ಭಿನ್ನತೆಗಳು ಕಂಡು ಬರುತ್ತವೆ. ಇದರೆ ಇವರ ದೇವರುಗಳು ಬಹುತೇಕ ಎಲ್ಲಾ ಒಂದೇಯಾಗಿವೆ. ಶ್ರೀಮರುಳಸಿದ್ದೇಶ್ವರ, ಕೊಟ್ಟೂರೇಶ್ವರ,, ವೀರಭದ್ರ, ಬಸವಣ್ಣ, ಇವೆಲ್ಲ ಇವರು ನಡೆದುಕೊಳ್ಳುವ ದೇವರು ಮತ್ತು ಇವರ ಮನೆ ದೇವರುಗಳು, ಎಂದು ಹೇಳಬಹುದು. ಇಲ್ಲಿಯ ಲಿಂಗವಂತರ ಮುಖ್ಯ ಉದ್ಯೋಗ ಒಕ್ಕಲುತನ ಮತ್ತು ಕೆಲವರು ವ್ಯಾಪಾರವನ್ನು ಮಾಡುತ್ತಾರೆ.

### ಪರಿಶಿಷ್ಟ ಜಾತಿಯವರು

ಉಜ್ಜನಿಯಲ್ಲಿ ಪರಿಶಿಷ್ಟ ಚಾತಿಯವರು ವಾಸಿಸುತ್ತಿದ್ದಾರೆ. ಇವರು ಕೂಡ ಕೂಸು ಹುಟ್ಟಿದಾಗ ಹುಟ್ಟಿದ ಶಾಸ್ತ್ರ ಮಾಡಿ ಹದಿಮೂರನೆಯ ದಿನಕ್ಕೆ ಹೆಸರು ಇಡುತ್ತಾರೆ. ಮದುವೆಯಂಥ ಆಚರಣೆಗಳನ್ನು ಬಹಳ ಸಂಪ್ರದಾಯಬದ್ಧವಾಗಿ ಆಚರಿಸುತ್ತಾರೆ. ಆದರೆ ಈ ಜನಾಂಗದಲ್ಲಿ ಈ ದಿನಮಾನದಲ್ಲಿ ಬಹಳಷ್ಟು ಬದಲಾವಣೆಗಳು ಆಗಿವೆ. ಮೂಲತಃ ಬಹಳಜನ ಅನಕ್ಷರಸ್ಥರು ಇದ್ದರು. ಈಗ ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣ ಕೊಡಿಸಿದ್ದಾರೆ. ಇದರ ಸಲವಾಗಿ ಶಿಕ್ಷಕರು, ಪೋಲೀಸ್, ಮುಂತಾದ ಇಲಾಖೆಗಳಲ್ಲಿ ಪರಿಶಿಷ್ಟ ಹುಡಗರು ಸೇವೆ ಸಲ್ಲಿಸುತ್ತಿದ್ದಾರೆ. ತೀರಿಕೊಂಡಾಗ ಕಳೇಬರವನ್ನು ಹುಗಿಯುತ್ತಾರೆ. ತ್ವನ್, (ಪಾಂಡರೋಗ) ಇದ್ದರೆ ಸುಡುತ್ತಾರೆ. ಉಜ್ಜಿನಿಯಲ್ಲಿ ಮನೆತವ್ವನ ಗುಡಿ ಬಹಳ ಸುಂದರವಾಗಿ ಕಟ್ಟಿಸಿಕೊಂಡಿದ್ದಾರೆ. ಆಗ ಆಗ ಅವಳ ಜಾತ್ರೆಯನ್ನು ನಡೆಸುವುದುಂಟು.

### ವಾಲ್ಮೀಕಿ ಜನಾಂಗ

ಉಜ್ಜಿನಿಯಲ್ಲಿ ವಾಲ್ಮೀಕಿ [ನಾಯಕ] ಜನಾಂಗದವರು ಕಡಿಮೆ ಪ್ರಮಾಣದಲ್ಲಿದ್ದು. ಕೆಲವರಿಗೆ ಭೂಮಿ, ಆಸ್ತಿ ಇದ್ದರೆ ಇನ್ನು ಕೆಲವರು ಬೇರೆ ಬೇರೆ ಉದ್ಯೋಗಗಳನ್ನು ಮಾಡಿ ಬದುಕುತ್ತಿದ್ದಾರೆ. ಇವರ ಮನೆದೇವರು ಬಹಳವಾಗಿ ನಾಯಕನಟ್ಟಿ ತಿಪ್ಪೇಸ್ವಾಮಿ, ಕಂಪ್ಲೆಪ್ಪ, ಆಂಜನೇಯ ಉಚ್ಚಂಗಮ್ಮ ಇವರುಗಳ ಮನೆದೇವರುಗಳು ಆಗಿದ್ದಾರೆ. ಮದುವೆಯಂಥ ಮಂಗಲ ಪ್ರಸಂಗಗಳಲ್ಲಿ ಸಾಮಾಜಿಕ ಸಹಕಾರ ವಿಶೇಷವಾಗಿರುತ್ತದೆ. ಹೆಣ್ಣು ಗಂಡು ಗಟ್ಟಿ ಮಾಡುವಾಗ ಸಮಾಜಿದ ಪ್ರಮುಖರು ಕೂಡಿದ ಸಮಯದಲ್ಲಿ ಒಂದಿಷ್ಟೆ ಹಣವನ್ನು ದೈವಕ್ಕೆ ಕೊಡಲಾಗುವುದು.

ಇಲ್ಲಿ ದೈವ ಎಂದರೆ ಸಮಾಜ ಎಂದರ್ಥ. ಕೂಡಿದ ಸಮಾಜ ಬಾಂಧವರು ದೇವರಿಗೆ ಸಮಾನರೆನ್ನಿಸುತ್ತಾರೆ. ಈ ಹಣ ಸಮಾಜಕ್ಕೆ ಸಲ್ಲುವ ಮರ್ಯಾದೆ ಇಂಥ ಯಾವುದೇ ಕಾರ್ಯಕ್ರಮವಿರಲಿ ಸಮಾಜಕ್ಕೆ ಒಂದು ಪಾಲು ಹೋಗುತ್ತದೆ. ಮದುವೆಗಿಂತ ಮೊದಲು "ಹಿರಿಯರಿಗೆ ಮಾಡುವುದು" ಹಿರಿಯರನ್ನು ಮಾಡಿದ ದಿನ ಮಾಂಸದ ಅಡಿಗೆ, ಹೋತ, ಕುರಿ ಕೊಯ್ಯುವುಂಟು. ಮದುವೆ ಸಮಾರಂಭಕ್ಕೆ ವೀರಶೈವ ಜಂಗಮರನ್ನು ಕರೆತರುವುದುಂಟು. ಸುರಗಿ ಪದ್ಧತಿ ಇದೆ. ಮೊದಲೆಲ್ಲ ಮೂರು ದಿನಗಳ ಮದುವೆ ಪದ್ಧತಿಯಿತ್ತು. ಕ್ರಮೇಣ ಸಂಕ್ಷಿಪ್ತಗೊಳ್ಳುತ್ತ ನಡೆದಿದೆ. ಅಕ್ಕಿಕಾಳು, ಜೋಳದಕಾಳು ಎರೆಡನ್ನು ಕೊಡಿಸಿ ಅಕ್ಕಿಕಾಳು (ಅಕ್ಷತೆ) ತಯಾರಿಸಲಾಗುತ್ತದೆ.

ಮದುವೆಯಲ್ಲಿ ತಮ್ಮ ತಮ್ಮ ಶಕ್ತ್ಯಾನುಸಾರ ಜನರಿಗೆ ಊಟಕ್ಕೆ ಮಾಡಿಸಲಾಗುವುದು. ನ್ಯಾಯ ನಿಭಾದಿಗಳು ಬಂದರೆ ಹಿರಿಯರೆಲ್ಲ ಸೇರಿ ವಿಷಯಕ್ಕೆ ಸಂಬಂಧಪಟ್ಟಂತೆ ಚರ್ಚೆ, ನಿರ್ಣಯಗಳು ನಡೆಯುತ್ತವೆ. ಈ ಸಮಾಜದಲ್ಲಿ ತೀರಿಕೊಂಡಾಗ ಹುಗಿಯುವುದು, ಸಾಮಾನ್ಯ ತೀರಿಕೊಂಡ ಮೂರನೆಯ ದಿನಕ್ಕೆ 'ಇಸಬಾಯಿ' ತೊಳೆಸುವ ಕಾರ್ಯಕ್ರಮವಿರುತ್ತದೆ. ತೀರಿಕೊಂಡ ವ್ಯಕ್ತಿಗೆ ತಲೆಕೊಡುವವನೊಬ್ಬ ಇರುತ್ತಾನೆ. ಒಳ್ಳೆಯ ದಿನ ನೋಡಿ ಈತನ ತಲೆಬೋಳಿಸಿ, ಹೊಸಬಟ್ಟೆ ತೊಡಿಸಿ, ಸಿಹಿಯಾಟ ಮಾಡಿಸಬೇಕು. ತೀರಿಕೊಂಡವರ ಮನೆಯಲ್ಲಿ ತಿಂಗಳೊಳಗಾಗಿ ಸಿಹಿ ಅಡಿಗೆ ಮಾಡಿ ತಿಥಿಯಾಗಬೇಕು. ಬಹಳಷ್ಟು ಜಾತಿಗಳಲ್ಲಿರಿವ ಈ ಆಚರಣೆ ಉಜ್ಜಿನಿಯ ವಾಲ್ಮೀಕಿ ಸಮಾಜದಲ್ಲಿಯೂ ಇದೆ. ತೀರಿಕೊಂಡ ದಿನ ಹೆಣದ ಮೇಲೆ ಬರುವವರು ಟೆಂಗಿನಕಾಯಿ, ಉದಿನಕಡ್ಡಿ, ಹೂವಿನಮಾಲೆ ತರುತ್ತಾರೆ. ಈ ರೀತಿಯ ಆಚಾರ ಸಂಪ್ರದಾಯಗಳನ್ನು ನಾಯಕ ಜನಾಂಗದವರು ಉಳಿಸಿಕೊಂಡು ಬಂದಿದ್ದಾರೆ ಎಂದು ಉಜ್ಜಿನಿ ತಳವಾರ ಸಿದ್ಧಲಿಂಗಪ್ಪ ಹೇಳುತ್ತಾರೆ.

ಬಡಿಗ-ಕಂಬಾರರು

"ಕಾಸಿ ಕಂಬಾರನಾದ ಬೀಸಿ ಮಡಿವಾಳವಾದ ವೇದವನೂದಿ ಹಾರುವನಾದ" ಎನ್ನುವಂತೆ ಇವರುಗಳ ಕಸುಬುಗಳ ಮೇಲೆಯೇ ಇವರ ಜಾತಿಗಳು ಸೃಷ್ಟಿಯಾಗಿವೆ. ಉಜ್ಜಿನಿಯಲ್ಲಿ ಇವರು ಹಿಂದಿನಂತೆ ಆಯ ಪದ್ಧತಿಯ ಮೇಲೆ ವೃತ್ತಿಯನ್ನು ಮಾಡುವುದು ನಿಲ್ಲಿಸಿದ್ದಾರೆ. ಇವರು ಹಣಕ್ಕೆ ಈ ಕೆಲಸಗಳನ್ನು ಈಗ ಮಾಡುತ್ತಾರೆ. ಹಿಂದೆ ಬಡಿಗತ ಕಂಬಾರಿಕೆ ಎರೆಡನ್ನು ಮಾಡಿದರು. ಕಂಬಾರಿಕೆಯನ್ನು ಮಾತ್ರ ಆಯ ಪದ್ಧತಿಯ ಮೇಲೆ ಮಾಡಿ ಬಡಿಗಿತನವನ್ನು ಪಗಾರೆದ ಮೇಲೆ ಮಾಡುತ್ತಿದ್ದರು. ಆಯ ಮಾಡುವ ಬಡಿಗ ಅಥವಾ ಕಂಬಾರನಿಗೆ ವರ್ಷಕ್ಕೊಮ್ಮೆ ನಿಗದಿಪಡಿಸಿದ ಕಾಳನ್ನೇ ಕೊಡಲಾಗುತ್ತಿತ್ತು. ಕಂಬಾರನಿಗೆ ೨ ಎತ್ತಿನ ಒಕ್ಕಲಿಗ ೨೨ ಸೇರು ಜೋಳ, ೨ ಸೇರು ಕಡ್ಲಿ, ೫ ಸೇರು ತೊಗರಿ ಕೊಡಬೇಕು. ಬಡಿಗನಿಗೆ ೩೫ ಸೇರು ಜೋಳ, ತೊಗರಿ, ಕಡ್ಲಿ ಕೊಡಬೇಕು. ಇಷ್ಟೆಲ್ಲದೆ ಹೊಲದಲ್ಲಿ ಮೇವು ತೆನೆಯನ್ನು ಕೊಡಲಾಗುತ್ತಿತ್ತು.

ಇವರ ಮನೆದೇವರು ತಿಂಥಣಿ ಮೌನೇಶ, ಕಾಳಮ್ಮ ಇವರಲ್ಲಿ ಬೇರೆ ಬೇರೆ ಗೋತ್ರಗಳಿವೆ. ಬೀಗತನ ಮಾಡುವಾಗ ಗೋತ್ರಗಳು ಬೇರೆ ಬೇರೆಯಾಗಬೇಕು. ಇಲ್ಲಿ ಕೆಲವರು ಸ್ವಗೋತ್ರವರು ಇದ್ದಾರೆ. ಬೇರೆ

ಬೇರೆ ಗೋತ್ರದವರೂ ಇದ್ದಾರೆ. ಸ್ವಗೋತ್ರವರು ಅಣ್ಣ-ತಮ್ಮಂದಿರೆನಿಸುತ್ತಾರೆ. ಅನ್ಯಗೋತ್ರದವರು, ಕೆಲವರು ಸಂಬಂಧ ಬೆಳೆಸಿಕೊಂಡ ಬೀಗರೂ ಆಗಿದ್ದಾರೆ. ಇವರು ಕೂಸು ಹುಟ್ಟಿದಾಗ ೫ನೆ ದಿನಕ್ಕೆ ಹುಟ್ಟಿದ ಶಾಸ್ತ್ರ ಮಾಡಿ ಮುಂದೆ ಮುಹೋರ್ತ ನೋಡಿ ಒಳ್ಳೆ ದಿನದಂದು ತಿಂಗಳೊಳಗಾಗಿ ಹೆಸರಿಡುವ ಪದ್ಧತಿ ಇದೆ.

**ಅಗಸರು :** ಉಜ್ಜಿನಿಯಲ್ಲಿ ಅಗಸರು ತಮ್ಮ ಮೂಲ ಉದ್ಯೋಗವನ್ನು ಮಾಡಿದರೆ, ಇನ್ನು ಕೆಲವು ಅದನ್ನು ಬಿಟ್ಟು ಒಕ್ಕುಲುತನವನ್ನು ಆಶ್ರಯಿಸಿದ್ದಾರೆ. ಇವರು ಮಡಿವಾಳ ಮಾಚಿದೇವನ ಕುಲದವರು. ಇವರ ದೇವರು ಎಲ್ಲಮ್ಮ, ಆಂಜನೇಯ, ಮರುಳುಸಿದ್ದೇಶ್ವರ ಮುಂತಾದ ದೇವರಗಳನ್ನೇ ಪೂಜಿಸುವುದು ಬೆಳೆಯುತ್ತಿದೆ. ಆದರೆ ಇವರಲ್ಲಿ ಬೆಡಗುಗಳು ಇಲ್ಲಾ ಕುಲದವರಿದ್ದರೆ ಸಾಕು ಮದುವೆ ಸಂಪ್ರದಾಯಗಳು ನಡೆದು ಹೋಗುತ್ತವೆ. ಎಲ್ಲಾ ಜನಾಂಗದಂತೆ ಇವರು ಕೂಡ ಕೂಸು ಹುಟ್ಟಿದಾಗ ಸಂಪ್ರದಾಯಗಳನ್ನು ಆಚರಿಸುತ್ತಾರೆ. ಮರಣ ಹೊಂದಿದಾಗ ಅದೇ ನಿಯಮಗಳನ್ನು ಪಾಲಿಸುತ್ತಾರೆ.

**ಕ್ಷಾರಿಕರು :** ಇಲ್ಲಿ ಕ್ಷಾರಿಕರು ತಮ್ಮ ಮೂಲ ಉದ್ಯೋಗವನ್ನು ಮಾಡಿದರೆ ಇನ್ನು ಕೆಲವು ಇತರೆ ಕಸಬುಗಳಲ್ಲಿಯೂ ತೊಡಗಿದ್ದಾರೆ. ಮುಂಚೆ ಆಯಕ್ಕೆ ಈ ಕೆಲಸವನ್ನು ಮಾಡುತ್ತಿದ್ದರು. ಈಗ ಹಣಕ್ಕೆ ಈ ಕೆಲಸವನ್ನು ಮಾಡುತ್ತಾರೆ. ಕೂಸು ಹುಟ್ಟಿದಾಗ ಲಿಂಗ ಕಟ್ಟಿಸುತ್ತಾರೆ. ಈ ಸಂದರ್ಭದಲ್ಲಿ ವಿಧಿವಿಧಾನಗಳನ್ನು ಸ್ವಾಮಿಗಳೆ ಅದವರು ನಡೆಸಿಕೊಡುತ್ತಾರೆ. ನಂತರ ನಾಮಕರಣ ಮಾಡಲಾಗುತ್ತದೆ. ಮದುವೆಯಲ್ಲಿ ಐರಾಣಿ ತೆರುವುದು ಮುಂತಾದ ಆಚರಣೆಗಳು ಬಳಕೆಯಲ್ಲಿ ಉಂಟು. ಮುಂಚೆ ಇದ್ದ ಮದುವೆಯ ಆಚರಣೆಗಳು ಈಗ ಕ್ರಮೇಣ ಮರೆಯಾಗುತ್ತಿವೆ.

**ನೇಕಾರರು :** ಉಜ್ಜಿನಿ ಗ್ರಾಮದ ಜನಪದ ವೃತ್ತಿಕಾರರಲ್ಲಿಯೇ ಅತ್ಯಾಧಿಕ ಸಂಖ್ಯೆಯಲ್ಲಿರುವವರೆಂದರೆ ನೇಕಾರರು-ನೇಗಿಯವರು, ನೇಯುವವರು, ದೇವಾಂಗದೇವರು, ಪದ್ಮಸಾಲಿಯವರು, ಜಾಡರು, ಜೇಡರು ಎಂದು ಕರೆಯುತ್ತಾರೆ. ದೇವರ ದಾಸಿಮಯ್ಯನ ಕುಲ ಸಂಬಂಧವನ್ನು ಸೂಚಿಸಿದರೆ ದೇವಾಂಗ ಎಂಬುದು ಋಷಿಯ ಮೂಲವನ್ನು ಹೇಳುತ್ತದೆ. ಬಟ್ಟೆಯನ್ನು ನೇಯುವುದರಿಂದ ಇವರನ್ನೇ ನೇಕಾರರೆಂದು ಕರೆಯಲಾಗಿದೆ.

ಉಜ್ಜಿನಿಯಲ್ಲಿರುವ ನೇಕಾರರು ನಾನಾ ನಮೂನೆಯ ಸೀರೆಗಳನ್ನು ನೇಯುತ್ತಾರೆ. ಸ್ತ್ರೀ ಪುರುಷರು ಚಿಕ್ಕ ಮಕ್ಕಳೆಲ್ಲರೂ ನೇಯ್ಗೆಯ ಕೆಲಸವನ್ನೇ ಮಾಡುತ್ತಾರೆ. ನೂಲನ್ನು ತೊಳೆದು ಹಿಂಜಿ ಹಿಡಿ ಹಿಂಡಿ ಒಣಗಿಸಿ, ಚಕ್ರದ ಸಹಾಯಿದಂದ ಬಿಡಿಸಿ ಲಡಿ ಸಿದ್ಧಪಡಿಸಿಕೊಂಡು ಉಂಕಿಯಿಂದ ತಿದ್ದಿತೀಡಿ ಹರಿದ ಎಳೆಗಳನ್ನು ಜೋಡಿಸಿ ಮಗ್ಗದ ಮನೆಗೊಯ್ದು ಮಗ್ಗದಲ್ಲಿ ಜೋಡಿಸಿ ನೇಯ್ದು ಸೀರೆಯನ್ನು ಸಿದ್ಧಪಡಿಸುತ್ತಾರೆ. ನೇಯ್ಗೆಯ ಸಮಯದಲ್ಲಿ ಬೇಕಾಗುವ ಸಲಕರಣೆಗಳೆಂದರೆ ಹಾಸಹರಿ, ಗಣಿ, ಶಟಲ್, ಕುಂಟೆ, ಅಡದಂಡಿಗಿ, ಕಂಬ, ಗಾಡ, ಲಾಳಿ. ತಂತಿಬೀಜಾ, ರೀಲ್, ಇತ್ಯಾದಿ ನೇಕಾರರು ಪ್ರಮುಖವಾಗಿ ಟೋಪಿನ ತೆನೆಸೀರಿ, ಪಂಚೆ, ಟವಲ್, ಮುಂತಾದ ವಸ್ತ್ರಗಳನ್ನು ನೇಯುತ್ತಾರೆ. ಅವುಗಳನ್ನೇ ಮಾರಾಟ ಮಾಡಿ ಜೀವನ ನಡೆಸುತ್ತಾರೆ.

ಬ್ರಾಹ್ಮಣ, ಮುಸಲ್ಮಾನ, ವೈಶ್ಯರು, ಬಾರಿಕರು, ಕೊರವರು

ಇತರ ಜನಪದ ವೃತ್ತಿಕಾರರು ಕೈಗೊಂಡು ಬಂದಿರುವಂತಹ ಅನುವಂಶಿಕ ವೃತ್ತಿಯಿಂದ ಹೊರತಾದ ಜನಪದ ವರ್ಗಗಳಿವು. ಕ್ರಮವಾಗಿ ಬ್ರಾಹ್ಮಣರು ಮುಸಲ್ಮಾನರು ಮೂಲದಲ್ಲಿ ಒಕ್ಕಲುತನವೇ ಪ್ರಧಾನ ವೃತ್ತಿಯಾಗಿದೆ. ಚಲವಾದಿಗಳು ಮದುವೆ ಸಮಯದಲ್ಲ ಓಲುಗ ಊದಿದರೆ, ಬಾರಿಕರು ಆಯಗಾರಿಕೆ ಕೆಲಸ ಮಾಡಿದರೆ, ಕೊರವರು ಬುಟ್ಟಿ ಹೆಣೆಯುತ್ತಾರೆ.

ಒಟ್ಟಿನಲ್ಲಿ ಉಜ್ಜಿನಿ ಗ್ರಾಮದಲ್ಲಿ ನೆಲೆನಿಂತಿರುವ ೧೮ ಜನಪದ ವರ್ಗಗಳಲ್ಲಿ ಬಹುಪಾಲು ವರ್ಗಗಳು ಅನುವಂಶಿಕ ವೃತ್ತಿಯಲ್ಲಿಯೇ ನಿರತರಾಗಿರುವುದು ಕಂಡು ಬಂದರೂ, ಅವುಗಳಿಂದ ಮುಕ್ತಿ ಪಡೆದು ಆಧುನಿಕ ವೃತ್ತಿಯಲ್ಲಿ ತೊಡಗಿಕೊಂಡಿರುವವರ ಸಂಖ್ಯೆಯೇ ಹೆಚ್ಚೆನ್ನಬೇಕು. ಅಂದರೆ ಕಾಳು-ಕಡಿ, ಹಣ್ಣು ತರಕಾರಿ, ಕಿರಾಣಿ, ಪಾನಬೀಡಿ, ಹೋಟೆಲ್‌ಗಳು ಇತ್ಯಾದಿ ಕೆಲವರು ಅತಿ ಆಸ್ತಿವಂತರು ಒಕ್ಕಲುತನವನ್ನೇ ಪ್ರಧಾನ ವೃತ್ತಿಯನ್ನಾಗಿ ಅವಲಂಬಿಸಿದ್ದಾರೆ. ಇಂದಿಗೂ ಯಾವುದೇ ಇರಲಿ ನಿಷ್ಠೆಯಿಂದ ಕೆಲಸಮಾಡಿ ನೆಮ್ಮದಿಯಿಂದ ಜೀವನ ಸಾಗಿಸುತ್ತಿದ್ದಾರೆ ಉಜ್ಜಿನಿ ಜನಪದರು.

## ಆ. ಧಾರ್ಮಿಕತೆ

ಭಾರತೀಯ ಪರಂಪರೆಗನುಗುಣವಾದ ದೈವಶ್ರದ್ಧೆಗೆ ಉಜ್ಜಿನಿಯೂ ಹೊರತಾಗಿಲ್ಲ. ಊರ ತುಂಬ ಇರುವ ಗುಡಿ ಗೋಪುರ ಗುಂಡಾರಗಳು ಆಯಾ ದೇವರಿಗೆ ಸಂಬಂಧಿಸಿದಂತೆ ತೋರುವ ಅನೇಕ ಸಂಪ್ರದಾಯ ಆಚರಣೆಗಳು ಇವರ ಭಕ್ತಿ ಶ್ರದ್ಧೆಗಳನ್ನು ದೃಢಪಡಿಸುತ್ತದೆ. ಜಾನಪದರಿಗೆ ದೇವರನ್ನು ಪ್ರತ್ಯೇಕಿಸಿದ ಧರ್ಮವಿಲ್ಲ ಇವರ ಧಾರ್ಮಿಕ ಸಂಪ್ರದಾಯ ಆಚರಣೆಗಳು ದೈವ ನಂಬಿಕೆಯಡಿಯಲ್ಲಿ ಗಾಢವಾಗಿವೆ.

ದೇವರನ್ನು ಕುರಿತಾದ ಕಥೆಗಳು ಗುಡಿಗಳ ನಿರ್ಮಾಣ, ಪೂಜೆ, ಪುನಸ್ಕಾರ ಉತ್ಸವಾದಿಗಳನ್ನು ನೋಡುತ್ತಾ ಹೋದಂತೆ ಜಾನಪದರ ದೈವಭಕ್ತಿ ಸಹಜವಾಗಿ ಗೋಚರಿಸುತ್ತದೆ. ಉಜ್ಜಿನಿ ಧಾರ್ಮಿಕತೆಯ ತವರೂರು. ವೀರಶೈವ ಧರ್ಮದ ಸ್ಥಾಪನೆಗೆ ಹೆಸರಾಂತ ಬುದ್ಧಿಜೀವಿಗಳನ್ನು ನೀಡಿದ ಉಜ್ಜಿನಿಯಲ್ಲಿ ಸದಾ ಪುರಾಣ ಪ್ರವಚನಗಳಿಂದ ಕೂಡಿ ಧಾರ್ಮಿಕ ಕೇಂದ್ರವಾಗಿ ಕಂಗೊಳಿಸುತ್ತದೆ. ಅಂತೆಯೆ ಇಲ್ಲಿಯ ಜನ ಎಷ್ಟೊಂದು ಧಾರ್ಮಿಕ ಪರಂಪರೆಯನ್ನು ಉಳ್ಳವರೆಂದರೆ.

ಉಜ್ಜಿನಿ ಸದ್ಧರ್ಮ ಪೀಠದ ಪ್ರಾಚೀನತೆ, ಇತಿಹಾಸ, ಗುರು ಪರಂಪರೆ ನಡುವೆ ಮೇರು ಪರ್ವತವಾಗಿ ಗೋಚರಿಸುವುದು ಶ್ರೀ ಜಗದ್ಗುರು ಉಜ್ಜಯಿನಿ ಮಹಾಸಂಸ್ಥಾನ ಕೋರ್ಟು.

ಧರ್ಮಕ್ಕೆ ಚ್ಯುತಿ, ಜಾತಿ ಭ್ರಷ್ಟತೆ, ಮಠದ ವ್ಯಾಜ್ಯ ಪೀಠಗಳ ಸಮಸ್ಯೆ ಬಗೆಹರಿಸಲು ಹಿಂದೂ ಧರ್ಮಕ್ಕೆ ಸುಪ್ರೀಮ್‌ಕೋರ್ಟ್ ಇದ್ದದ್ದು ಬಹುತೇಕ ಉಜ್ಜಿನಿ ಪೀಠದಲ್ಲಿ ಮಾತ್ರ.

ಕೇವಲ ಧರ್ಮಪ್ರಚಾರ, ಶಿವದೀಕ್ಷೆಯಲ್ಲದೆ ರಾಜ ಮಹಾರಾಜರ ಕಾಲದಿಂದಲೂ ಧರ್ಮದ

ವ್ಯಾಜ್ಯಗಳನ್ನು ಬಗೆಹರಿಸುವ ಶಿಕ್ಷೆ ಕೊಡುವ ಪರಮ ಅಧಿಕಾರವನ್ನು ರಾಜರು, ಪಾಳೆಯಗಾರರು, ಉಜ್ಜಿನಿ ಸದ್ಧರ್ಮ ಮಹಾಸಂಸ್ಥಾನ ನ್ಯಾಯಾಲಯಕ್ಕೆ ನೀಡಿದ್ದರು.

ಇಂತಹದೊಂದು ಸದ್ಧರ್ಮ ಕೋರ್ಟು ಪಂಚಪೀಠಗಳಲ್ಲಿ ಉಜ್ಜಿನಿ ಪೀಠದಲ್ಲಿ ಮಾತ್ರ ಇತ್ತು, ಇದೆ. ಅದನ್ನು ಈಗಲೂ ನೋಡಬಹುದು. ಅಂದ ಮೇಲೆ ಶ್ರೀ ಪೀಠದ ಪ್ರಾಚೀನತೆ, ಸಾಂಸ್ಕೃತಿಕ ಶ್ರೀಮಂತಿಕೆ ಎಷ್ಟಿತ್ತು ಎಂಬುದನ್ನು ಗಮನಿಸಬೇಕಾದ ಅಂಶವಾಗಿದೆ. ಸದ್ಧರ್ಮ ಪೀಠದ ಸಂಸ್ಥಾನ ಕೋರ್ಟಿಗೆ ಕಾಶಿ ಪೀಠ, ಕೇದಾರ ಪೀಠ, ಶ್ರೀ ಶೈಲ ಮತ್ತು ರಂಭಾಪುರ ಪೀಠದಿಂದಲೂ ಫಿರ್ಯಾದ್‌ಗಾರರು ನ್ಯಾಯ ಅರಸಿ ಬರುತ್ತಿದ್ದರು. ಅಂದ ಮೇಲೆ ಸದ್ಧರ್ಮ ಕೋರ್ಟು ನೀಡುತ್ತಿದ್ದ ನಿಷ್ಪಕ್ಷಪಾತ ತೀರ್ಪು ಎಷ್ಟು ಕರಾರುವಾಕ್ಕಾಗಿರಬೇಕು.

ವೀರಶೈವ ಧರ್ಮಿಯರಿಗೆ ಮಾತ್ರ ಸದ್ಧರ್ಮ ನ್ಯಾಯಾಲಯ ತೀರ್ಪು ನೀಡಿ ವ್ಯಾಜ್ಯ ಬಗೆಹರಿಸುತ್ತಿದ್ದಿಲ್ಲ. ಸಮಾಜದ ಎಲ್ಲಾ ವರ್ಗದವರು ತಮಗೆ ಅನ್ಯಾಯವಾದಗ ನ್ಯಾಯಬೇಡಿ ಇಲ್ಲಿಗೆ ಬರುತ್ತಿದ್ದದು ಪರಧರ್ಮ ಸಹಿಷ್ಣುತೆಗೆ ದ್ಯೋತಕವಾಗಿತ್ತು. ಬ್ರಿಟಿಷ್ ಆಳ್ವಿಕೆಯಲ್ಲಿಯೂ ಸದ್ಧರ್ಮ ಕೋರ್ಟು ಅಸ್ತಿತ್ವದಲ್ಲಿತ್ತು. ತಮ್ಮ ಆಡಳಿತ ವ್ಯಾಪ್ತಿಯಲ್ಲಿ ಜನಾಂಗಿಯ ಘರ್ಷಣೆಯಾದರೆ ಶಾಂತಿ ಕಾಪಾಡುವ ದೃಷ್ಟಿಯಿಂದ ಪರಂಗಿ ದೊರೆಗಳು ಉಜ್ಜಿನಿ ಪೀಠದ ಸದ್ಧರ್ಮ ನ್ಯಾಯಾಲಯಕ್ಕೆ ಹೋಗುವಂತೆ ಆದೇಶಿಸುತ್ತಿದ್ದರು.

ಬ್ರಿಟೀಷ್ ದೊರೆಗಳು ಯಾವತ್ತೂ ಸದ್ಧರ್ಮ ತೀರ್ಪುಗೆ ಎದುರಾಗುತ್ತಿರಲಿಲ್ಲ. ಸದ್ಧರ್ಮ ಕೋರ್ಟು ತೀರ್ಪು ಎಂದರೆ ಇಂಗ್ಲಿಷ್ ರಾಜ ಮನೆತನ ನೀಡುತ್ತಿದ್ದ ಆಜ್ಞೆಯಂತೆಯೇ ಶಿರಸಾವಹಿಸಿ ಪಾಲಿಸುತ್ತಿದ್ದರು. ಭಾರತೀಯರು ಧರ್ಮದೆಡೆಗೆ ಇದ್ದ ಅತೀವ ಭಕ್ತಿ ಗೌರವಗಳನ್ನು ಬ್ರಿಟೀಷರು ಮನಗಂಡಿದ್ದರು. ಧರ್ಮ ಗುರುಗಳು ತೀರ್ಪು ನೀಡಿದರೆ ಎದುರು ಮಾತನಾಡರು. ಜಾತಿ ಕಳಂಕವಾದಗ ಸದ್ಧರ್ಮ ಪೀಠದ ಕೋರ್ಟ್‌ಗೆ ಅದರ ಅಹವಾಲನ್ನು ಅರ್ಪಿಸುತ್ತಿದ್ದರು. ಸದ್ಧರ್ಮ ಕೋರ್ಟ್‌ಗೆ ಶ್ರೀ ಪೀಠದ ಜಗದ್ಗುರುಗಳೇ ಶ್ರೇಷ್ಠ ನ್ಯಾಯಾಧೀಶರು, ಅವರದೆ ಅಂತಿಮ ತೀರ್ಮಾನ ಉಳಿದಂತೆ ಐರಣಿ ಬಸವಯ್ಯ, ಪ್ಯಾಟೀ ತಿಪ್ಪೆಸ್ವಾಮಿ ವಕೀಲರಾದರೆ ತರ್ಕಶಾಸ್ತ್ರ ಪ್ರವೀಣರಾದ ತೂಲಹಳ್ಳಿ ಮಠದ ಚೆನ್ನವೀರ ಶಾಸ್ತ್ರಿಗಳು (ಸರ್ಕಾರಿ ವಕೀಲರು). ಜಗದ್ಗುರುಗಳು ಇಲ್ಲದ ಸನ್ನಿವೇಶದಲ್ಲಿ ನ್ಯಾಯಾಧೀಶರಾಗುತ್ತಿದ್ದರು. ಇತರೆ ಸಮಯದಲ್ಲಿ ವಕೀಲರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಈಗಿರುವ ಕೋರ್ಟ್‌ನಂತೆಯೇ ಸದ್ಧರ್ಮ ಕೋರ್ಟಿನ ಕಾರ್ಯಭಾರ ಜರುಗುತ್ತಿತ್ತು.

ಫಿರ್ಯಾದಿದಾರರು ಶ್ರೀ ಪೀಠದ ಕೋರ್ಟ್ ಸ್ಟಾಂಪ್ ಖರೀದಿಸಿ, ಶುಲ್ಕ ಕಟ್ಟಿ ತಮ್ಮ ಫಿರ್ಯಾದಿಯನ್ನು ಬರೆದು, ಸ್ಥಳೀಯವಾಗಿದ್ದ ವಕೀಲರನ್ನು ಆಯ್ಕೆ ಮಾಡಿಕೊಳ್ಳಬೇಕು. ನಿಗದಿತ ದಿನಾಂಕದಂದು ಕೋರ್ಟ್‌ಗೆ ಹಾಜರಾಗಿ ವಾದಿ-ಪ್ರತಿವಾದಿ ಹೇಳಿಕೆ ವಾದಿಪರ ವಕೀಲ ಪ್ರತಿವಾದಿಪರ ವಕೀಲರ ವಾದಗಳನ್ನು ಆಲಿಸಿದ ನಂತರ ತೀರ್ಪನ್ನು ಜಗದ್ಗುರುಗಳು ನೀಡುತ್ತಿದ್ದರು. ಇದೇ ಅಂತಿಮ ತೀರ್ಪು.

೧೮೭೮ರಲ್ಲಿ ಸದ್ಧರ್ಮ ಪೀಠದ ನ್ಯಾಯಾಲಯದ ಆಜ್ಞೆ ಮೀರಿದ್ದಕ್ಕಾಗಿ ಆಂಧ್ರಪ್ರದೇಶದ ಉರವಕೊಂಡದ ಪ್ರಜೆಯೊಬ್ಬನಿಗೆ ಗ್ರಾಮದಿಂದ ಬಹಿಷ್ಕಾರ ಹಾಕಿದ್ದ ಸದ್ಧರ್ಮ ಕೋರ್ಟ್ ತೀರ್ಪಿನ ಆದೇಶದ ಪ್ರತಿಯೊಂದು ಇತ್ತೀಚೆಗೆ ದೊರಕಿವೆ.

ಪರಧರ್ಮದ ಸ್ತ್ರೀಯೊಂದಿಗೆ ಸಂಬಂಧವಿದ್ದವನಿಗೆ ಬಹಿಷ್ಕಾರ, ಜುಲ್ಮಾನೆ ಹಾಕಿದ ಪ್ರಕರಣ ಕೋರ್ಟಿನಲ್ಲಿ ಸುಳ್ಳು ಸಾಕ್ಷಿ ಹೇಳಿ ಶಿಕ್ಷೆಗೆ ಒಳಪಟ್ಟ ಅಪರಾದಿ, ತಾನು ನಿರಪರಾದಿ ಎಂದು ಸಾಬೀತುಪಡಿಸಿದ ಮೇಲೆ ಸುಳ್ಳು ಸಾಕ್ಷಿ ಹೇಳಿದವನಿಗೆ ಶಿಕ್ಷೆ, ದಂಡ ವಿಧಿಸುತ್ತಿದ್ದ ಪ್ರಸಂಗಗಳು ನಡೆದಿವೆ. ಇಂದಿಗೂ ಸರ್ಕಾರಿ ಕೋರ್ಟ್‌ಗಳು ಉಜ್ಜಿನಿ ಸದ್ಧರ್ಮ ಕೋರ್ಟಿನ ತೀರ್ಪನ್ನು ಎತ್ತಿ ಹಿಡಿದ ಪ್ರಸಂಗಗಳು ಇವೆ. ಧರ್ಮದ ವಿಚಾರದಲ್ಲಿ ತೀರ ಕ್ಲಿಷ್ಟ ಸಮಸ್ಯೆ ಎದುರಾದಾಗ ಸದ್ಧರ್ಮ ಕೋರ್ಟ್ ತೀರ್ಪು ನೀಡಿದ ಆದೇಶವನ್ನು ಕೋರ್ಟಿಗೆ ಹಾಜರುಪಡಿಸಿ ಜಯಪಡೆದ ಕಕ್ಷಿದಾರರು ಇದ್ದಾರೆ. ಶ್ರೀ ಪೀಠದಲ್ಲಿರುವ ಸದ್ಧರ್ಮ ಸಂಸ್ಥಾನ ಕೋರ್ಟ್ ತೀರ್ಪು ವ್ಯಾಜ್ಯ ಇತ್ಯರ್ಥ ಮೊದಲಾದವು ಸಂಶೋಧನೆಗೆ ಯೋಗ್ಯವಾಗಿದೆ. ಈ ಮಾಹಿತಿಯನ್ನು ಮಠದ ಸ್ವಾಮಿಗಳಿಂದ, ರುದ್ರಪ್ಪನವರಿಂದ ತಿಳಿಯಲಾಗಿದೆ.

**ಉಜ್ಜಿನಿಯ ಧಾರ್ಮಿಕತೆಯ ಪ್ರತೀಕವಾಗಿರುವ ಜರಮಲೆ ನಾಯಕರ ಮನೆಯಲ್ಲಿನ ಚಿನ್ನದ ಮಾವಿನಗೊಟ್ಟ**

ಜರಿಮಲಿ ನಾಯಕ ಭೂಮರಾಜನು ಹಂದಿಯನ್ನು ಬೇಟೆಯಾಡಲು ಹೋದಾಗ ಸಾಹಸದಿಂದ ಹಂದಿಯನ್ನು ಕೊಂದು ವಿಶ್ರಾಂತಿಗಾಗಿ ನೀರನ್ನು ಹುಡಕುತ್ತಿರಲು ಅಲ್ಲೆ ಇರುವ ಪೊದೆಯಲ್ಲಿ ನಾಯಿವೊಂದು ಮೈಯಲ್ಲ ರಾಡಿಯನ್ನು ಮುಣಗಿಸಿಕೊಂಡು ಹೋಗುವುದು ಕಂಡಿತು. ಇದನ್ನೇ ನೋಡಿ ನೀರು ಇರಬಹುದೆಂದು ಊಹಿಸಿ ಪೊದೆಯ ಒಳಹೊಕ್ಕ ಅಲ್ಲೊಂದು ಜಲಸ್ಥಾನ ಕಂಡಿತು. ಇದೇ ಇಂದಿನ ಮರುಳಸಿದ್ದೇಶ್ವರ ಲಿಂಗದ ಮೂಲ ಪೀಠ ಮೊದಲೇ ನೀರಡಿಕೆಯಿಂದ ಬಳಲಿದ ಭೂಮರಾಜ ಸಂತೋಷದಿಂದ ಅಲ್ಲಿಯ ಗುಣಿಯಿಂದ ನೀರನ್ನು ಬೊಗಸೆ ಕೈಗಳಿಂದ ಗಟಗಟನೆ ಕುಡಿದ ದಾಹ ಪರಿಹಾರವಾಗಿ ಅವನಿಗೆ ಅದೆಷ್ಟೋ ಸಂತೋಷವಾಯಿತು. ತಲೆ ಎತ್ತಿ ನೋಡದರೆ ಎದುರಿಗೆ ವಟ ವೃಕ್ಷ ಆವೃಕ್ಷದ ಟೊಂಗೆಯೊಂದರಲ್ಲಿ ಸ್ವಾಮಿಗಳು ಕೈಯಲ್ಲಿ ಮಾವಿನ ಹಣ್ಣನ್ನು ತಿನ್ನುತ್ತಿದ್ದರು. ಹಣ್ಣು ಪೂರ್ತಿಯಾಗಿ ಕೈಯಲ್ಲಿ ಗೊರಟ-ಗೊಟ್ಟ ಮಾತ್ರ ಉಳಿದಿತ್ತು. ಭೂಮರಾಜ ಆ ದಿವ್ಯ ವ್ಯಕ್ತಿಗೆ ದೀರ್ಘದಂಡ ನಮಸ್ಕಾರ ಮಾಡಿದ ಗುರುಗಳು ಕೈಯಲ್ಲಿದ್ದ ಆ ಮಾವಿನ ಬೀಜವನ್ನೆ ಅವನ ಸೆರಗಿನಲ್ಲಿಟ್ಟು ರಾಜನಾಗು ಎಂದು ಆರ್ಶೀವದಿಸಿದರು.

ಅಲ್ಲಿಯೇ ಭೂಗತವಾಗಿದ್ದ ತಮ್ಮ ಮಠವನ್ನೆ ಜೀರ್ಣೋದ್ಧಾರ ಮಾಡು ಎಂದು ಆಜ್ಞೆ ಮಾಡಿದರು. ಇಂದೂ ಗುರುಗಳು ಆರ್ಶೀವಾದಿಸಿ ಕೊಟ್ಟ ಮಾವಿನಗೊಟ್ಟಕ್ಕೆ ಬಂಗಾರದ ಕವಚ ಹಾಕಿ ವಂಶಪಾರಂಪರೆಯಾಗಿ ಈ ಪಾಳೆಯಗಾರರ ಮನೆತನದಲ್ಲಿ ಉಳಿಸಿಕೊಂಡು ಬಂದಿರುತ್ತಾರೆ. ನೋಟಲು ಪ್ರೇಕ್ಷಿಸುವವರು ಜರಮಲೆಗೆ ಹೋಗಿ ನೋಡಬಹುದು. ಇದು ಧಾರ್ಮಿಕತೆಯ ದ್ಯೋತಿಕವಾಗಿ ಕಂಡು ಬರುತ್ತದೆ.

ಬೆಳೆಗಾಗ ನಾನೆದ್ದು
ಯಾರನ್ನ ನೆನೆಯಲಿ
ಎಳ್ಳು ಜೀರಿಗೆ ಬೆಳೆಯಾಳು ಭೂಮಿತಾಯಿ

ಅವಳನೊಂದು ಗಳಿಗೆ ನೆನೆದೇವಾ ಎನ್ನುವಂತೆ. ಉಜ್ಜಿನಿಯ ಜನತೆ ಧರ್ಮದ ವಿಚಾರದಲ್ಲಿ ಬಹಳ ನಿಷ್ಠರು ಆ ನಿಷ್ಠತೆ ಪರಊರುಗಳಲ್ಲಿಯೂ ಹಬ್ಬಿ ಉಜ್ಜಿನಿಯ ಕೀರ್ತಿಯನ್ನು ಹಬ್ಬಿಸಿದೆ. ಜನಪದರು ಪ್ರಮುಖವಾಗಿ ದೇವರೆಂದರೆ ಯಾವಾಗಲೂ ಒಮ್ಮೆ ನೆನೆಪಿಗೆ ಬರುವವನಲ್ಲ ಅವನು ಅವರೊಡನೆಯೇ ಇರುವವನು. ಅವರಿಗೆ ಎಲ್ಲವೂ ದೇವರ ಸ್ವರೂಪವೇ ಬಾಗಿಲು ಅಂದರೆ ಮನೆಯ ತಲೆಬಾಗಿಲು ಲಕ್ಷ್ಮಿಸಮಾನ, ಮುಂಜಾನೆ, ಸಂಜೆ ಅದನ್ನು ಸಾರಿಸಿ, ರಂಗೋಲಿ ಇಟ್ಟು ಪೂಜಿಸಿ ಕೈ ಮುಗಿಯುತ್ತಾರೆ. ನೆಲ ಎಂದರೆ ಭೂಮಿ ತಾಯಿಲ್ಲವೇ. ಬೆಳಗಿನ ವೇಳೆಯಲ್ಲಿ ಗಿಡಕ್ಕೆ ಅಂಗಳ ಸಾರಿಸಿದಾಗ ಅಲ್ಲೊಂದು ರಂಗೋಲಿ ಇಟ್ಟು ಅದಕ್ಕೆ ಅರಿಸಿನ ಕುಂಕುಮ ಇಟ್ಟು ಉದುಬತ್ತಿ ಹೆಚ್ಚಿ ಕೈ ಮುಗಿಯುತ್ತಾರೆ.

ಸೋಮುವಾರ ಇತ್ಯಾದಿ ವಾರಗಳಲ್ಲಿ ನೇಮದಿಂದ ಈ ದೇವರ ದೀಪ ಹಚ್ಚುತ್ತಾರೆ. ಅಂದು ಎಂಜಲು ಮಾಡಿದ ಹಾಗೆ ಮೊಸರು ಕಡೆದು, ಬಂದ ಬೆಣ್ಣಿ ಕಾಯಿಸಿ ದೇವರ ದೀಪಕ್ಕೆ ಮೊದಲು ಬಿಡಲೇಬೇಕು. ಅವರಿಗೆ ಅಡುಗೆ ಒಲೆಯೂ ಲಕ್ಷ್ಮಿಯ ಸಮಾನ ಆದ್ದರಿಂದ ಪ್ರತಿದಿನ ಬೆಳೃಗೆ ಅದನ್ನೂ ಸಾರಿಸಿ ಎರೆಡೆಳೆ ರಂಗೋಲಿ ಇಡುತ್ತಾರೆ. ಇನ್ನು ವಾದದ ವಿಶೇಷ ಪೂಜೆ ದೇವರುಗಳೂ ಉಂಟು. ಸಾಮಾನ್ಯವಾಗಿ ಎಲ್ಲರಿಗೂ ಸೋಮವಾರ ವಾರದ ದಿನ ಏಕೆಂದರೆ ಉಜ್ಜಿಯ ಆರಾಧ್ಯದೈವ ಶ್ರೀ ಮರುಳುಸಿದ್ದೇಶ್ವರ. ಅಂದು ಮನೆದೇವರ ಹೆಸರಿನಲ್ಲಿ ವೀಶೇಷ ಪೂಜೆ. ನೆಲೆ ಮನೆ ಸಾರಿಸಿ ಸ್ನಾನ ಮಾಡಿ ಮನೆಯ ಯಜಮಾನರ ಎಲ್ಲಾ ಫೋಟ್‌ಗಳನ್ನು ಒರೆಸಿ, ಪೂಜೆ ಮಾಡುತ್ತಾರೆ. ಮನೇಲಿ ಕಾರೆವು ಆಗುವಂತಿದ್ದರೆ ಅಂದು ಬಂದ ಬೆಣ್ಣೆಯನ್ನು ಎಂಜಲು ಮಾಡೆದ ಹಾಗೆ ಕಾಯಿಸಿ ದೇವರ ದೀಪಕ್ಕೆ ಬೇಡುತ್ತಾರೆ. ಕೆಲವರಂತೂ ಹೊತ್ತು ಮುಳಗುವವರೆಗೆ ಊಟವನ್ನೆ ಮಾಡುವುದಿಲ್ಲ. ವಾರದ ದಿನದ ಜೊತೆಗೆ ಕೆಲವರು ಮುಂಗಳವಾರ ಹೆಣ್ಣು ದೇವರುಗಳನ್ನು ಪೂಜಿಸುತ್ತಾರೆ. ಗುರುವಾರ ರಾಘವೇಂದ್ರ, ಶುಕ್ರವಾರ ವನೆತಮ್ಮ, ಶನಿವಾರ ಆಂಜನೇಯ ದೇವರುಗಳನ್ನು ಪೂಜಿಸುತ್ತಾರೆ. ಈ ರೀತಿಯಾಗಿ ಉಜ್ಜಿನಿಯ ಜನತೆ ದೇವರನ್ನ, ದೈವವನ್ನೆ ನಂಬಿ ನಿಷ್ಠತೆಗೆ ಹೆಸರಾಗಿ ಬಾಳುತ್ತಿದ್ದಾರೆ.

## ೩. ಆರ್ಥಿಕ ಬದುಕು

ಅರ್ಥವ್ಯವಸ್ಥೆ ಯಾವುದೇ ಸಮಾಜದ ಅರ್ಥವ್ಯವಸ್ಥೆಯ ಅಧ್ಯಯನ ಅದು ನಾಗರೀಕತೆಯ ಯಾವ ಹಂತದಲ್ಲಿದೆ ಎಂಬುದರ ಸೂಚನೆಯೂ ಆಗಬಲ್ಲದು. ಕಾಲಾನುಗತವಾಗಿ ಮನುಷ್ಯ ಕೈಗೊಂಡ ಅನೇಕ ವಿಧವಾದ ವೃತ್ತಿ-ಉಪವೃತ್ತಿಗಳು ಬದುಕಿಗೆ ಅಗತ್ಯವಾದ ಅರ್ಥ ಸಂಪಾದನೆಯ ಗುರಿಯನ್ನು ಕೇಂದ್ರವಾಗಿ ಉಳ್ಳವಾಗಿದ್ದು ಜಾನಪದದ ಹಲವು ಮುಖಗಳು ಅರಳಲೂ ಕಾರಣವಾಗಿವೆ. ನಮ್ಮ ಜಾನಪದ ಅಧ್ಯಯನಕ್ಕೆ ಮೂಲಧಾರವಾದ ವೃತ್ತಿಗಳ ಆರ್ಥಿಕ ಸ್ಥಿತಿಗತಿ ಅವರ ಪಾರಂಪರಿಕ ಕಲೆ-ಸಂಪ್ರದಾಯ

ಮೊದಲಾದ ಜನಪದ ಬದುಕಿನ ಉಳಿವು ಅಳಿವಿನ ನಿರ್ಧಾರತೆ ಅಂಶವೂ ಆಗುವುದರಿಂದ ಉಜ್ಜಿನಿಯ ಅರ್ಥ ವ್ಯವಸ್ಥೆಯನ್ನು ಸೂಕ್ತ ರೀತಿಯಲ್ಲಿ ಗಮನಿಸಬೇಕಾಗುತ್ತದೆ.

ಉಜ್ಜಿನಿಯಲ್ಲಿ ಹೆಚ್ಚು ಜನ ಕೃಷಿಕರು ಹಾಗೂ ಕೃಷಿ ಕಾರ್ಮಿಕರು. ಕೃಷಿಕರಲ್ಲೂ ಸಣ್ಣ ಹಿಡುವಳಿದಾರರೇ ಹೆಚ್ಚು. ಅದರಲ್ಲೂ ಮಳೆಯನ್ನು ನಂಬಿ ಬದುಕುವವರ ಸಂಖ್ಯೆಯೇ ಬಹುಪಾಲು. ಮಳೆ ಕರುಣೆಸಿದಾಗ ಇವರ ಬದಕು ಹಸನಾಗಬಹುದಾದರೂ ಕಳೆದ ಹತ್ತಾರು ವರ್ಷಗಳಿಂದ ಒಂದೊಂದು ವರ್ಷ ಜೀವಿಸುವುದು ದುಸ್ತರವಾಗಿದೆ.

"ವ್ಯವಸಾಯ ನೀನು ಸಾಯ ನಿಮ್ಮಪ್ಪ ಸಾಯ" ಎನ್ನುವ ಗಾದೆ ಮಾತಿನಂತೆ. ವ್ಯವಸಾಯಕ್ಕೆ ಹೆಚ್ಚು ಜನ ಬೇಕು. ಕೆಲವರ ಮನೆಯಲ್ಲಿ ಜನಸಂಖ್ಯೆ ಕಡಿಮೆ, ಕೂಲಿ, ಆಳುಗಳು ಸಿಗುವುದೂ ಈಗ ಕಡಿಮೆ. ಹೀಗಾಗಿ ಕೆಲಸದ ಹಗುರತೆ ಲಾಭದ ದೃಷ್ಟಿಯಿಂದಾಗಿ ರೈತರು ತಂಬಾಕು, ಹತ್ತಿ, ತೋಟಗಳು, ಈರುಳ್ಳಿ ಮುಂತಾದ ವಾಣಿಜ್ಯ ಬೆಳೆಗಳ ಕಡೆಗೆ ಗಮನ ಹರಿಸಿದ್ದಾರೆ.

ಈಚೆಗೆ ಬಾವಿ ಬೋರುಗಳಿಂದ ತೆಂಗಿನತೋಟ, ರೇಷ್ಮೆ ತೋಟದ ಬೆಳೆಗಳನ್ನು ಬೆಳೆಯಲು ಆರಂಭಿಸಿದ್ದಾರೆ. ಕಬ್ಬಿನ ತೋಟ ಮಾಡಿ ಜನರಕಾಟ ತಡೆಯಲಾರದೆ ಅದು ಕೂಡ ತನ್ನ ಆಕರ್ಷಣೆಯನ್ನು ಕಳೆದುಕೊಂಡಿದೆ. ಮಳೆ ಬೆಳೆಗಳ ಅನಿಶ್ಚಿತತೆಯಿಂದಾಗಿ ರೈತನಿಗೆ ಲಾಭಕ್ಕಿಂತ ಉತ್ಪಾದನಾ ವೆಚ್ಚವೇ ಅಧಿಕಾವಗಿ ಸಾಲ ಸೂಲಗಳಿಗೆ ಬಲಿಯಾಗಿ ಕಷ್ಟ ಪಡುತ್ತಿದ್ದಾರೆ. ಹಿಂದೆ ನವಣೆ, ರಾಗಿ, ಕುಸಬಿ, ಎಳ್ಳು, ಸೂರ್ಯಕ್ರಾಂತಿ, ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಈಗ ಅವೆಲ್ಲ ತನ್ನ ತನವನ್ನೆ ಕಳೆದುಕೊಂಡಿವೆ. ಈಗ ಸಾಮಾನ್ಯ ರೈತನೂ ಪ್ರಯತ್ನಿಸುವ ಮುಖ್ಯ ವಾಣಿಜ್ಯ ಬೆಳೆಯೆಂದರೆ ಟೆಮೋಟ, ಬೆಂಡಿ, ಬದನೆ, ಜವಳಿಕಾಯಿ, ಮೇಣಸಿನಕಾಯಿ, ಉಪಜೀವನಕ್ಕೆ ಸಹಾಯಕವಾಗಿವೆ.

ಉಜ್ಜಿನಿಯಲ್ಲಿ ಅನೇಕ ಯೋಜನೆಗಳನ್ವಯ ಪರಿಶಿಷ್ಟ ಜಾತಿ-ವರ್ಗದವರಿಗೆ ಅನೇಕ ಸಾಲಗಳು ದೊರೆತಿದ್ದರೂ ಅವರು ಬಹುಮಟ್ಟಿಗೆ ಅವನ್ನು ಸರಿಯಾಗಿ ಉಪಯೋಗಿಸದ ಕಾರಣ ಅವರ ಆರ್ಥಿಕಸ್ಥಿತಿ ನೀರಿಕ್ಷೆ ಮೀರಿ ಬೆಳವಣಿಗೆಯನ್ನೆ ಕಂಡಿಲ್ಲ

ಸಣ್ಣ ಕುಟುಂಬದವರಿಗೂ ಇರುವ ಇನ್ನೊಂದು ಆದಾಯ ಮೂಲ ಕುರಿ, ಕೋಳಿ ಸಾಕಾಣಿಕೆ, ಕುರಿ ಒಂದು ರೀತಿ ಬಡವರ ಅಪದ್ಭಾಂದವ ''ಕುರಿ ಇದ್ದರೆ ಮನೆಯಲ್ಲಿ ಹಣವಿದ್ದಂತೆ ಎನ್ನುತ್ತಾರೆ. ಅಲ್ಲದೆ ಅವುಗಳ ನಿರ್ವಹಣೆಯೂ ಸುಲಭ ಹೀಗಾಗಿ ಅವುಗಳ ಬಗ್ಗೆ ಹೆಚ್ಚು ಒಲವಿದೆ. ಆದರೂ ಗೋಮಾಳ ಎಂದು ಕರೆಯಿಸಿಕೊಳ್ಳುವ ಕೆರೆಯಸುತ್ತಲ ಪ್ರದೇಶ ಹಳ್ಳಿಗಳ ಪ್ರದೇಶ ಈಗಿನ ಮನುಷ್ಯನ ದುರ್ಬುದ್ದಿ ಯಿಂದಾಗಿ ಅವುಗಳನ್ನು ಹೊಲಗಳನ್ನಾಗಿ ಮಾಡಿಕೊಂಡಿರುವುದರಿಂದ ಕುರಿ ದನಗಳಿಗೆ ಮೇಯಲು ಸ್ಥಳವಾಕಾಶ ಇಲ್ಲದೆ ಕಾರಣ ಅವರು ತೊಂದರೆ ಒಳಗಾಗಿದ್ದಾರೆ.

ಕೆಲವರು ಕೋಳಿ ಫಾರಂಗಳನ್ನು ಮಾಡಿ, ಅವುಗಳಿಗೆ ತಗುಲುವ ರೋಗ ರುಜಿನೆಗಳಿಂದ ಸಾಲವನ್ನೆ ಹೊತ್ತುಕೊಂಡು ಸಾಲಗಾರರಾಗಿದ್ದಾರೆ. ಮನೆಮಟ್ಟಿಗೆ ನಾಲ್ಕರು ಕೋಳಿಗಳನ್ನು ಸಾಕುತ್ತಿದ್ದರೆ,

ಬೇಸಿಗೆಯಲ್ಲಿ ಕೊಕ್ಕರು ರೋಗ ಬಂದು ಅವುಗಳು ಸಾಯುತ್ತಿವೆ. ಇಷ್ಟರೊಳಗೆ ಇವರು ತಿಂದದ್ದು ಮಾರಿದ್ದಷ್ಟೇ ಲಾಭ. ಹೀಗೆ ಸಣ್ಣ ಅತಿ ಸಣ್ಣ ಕುಟುಂಬದವರು ಬದುಕಿಗಾಗಿ ಆದಾಯಕ್ಕಾಗಿ ಬಹು ಬಗೆಯಾಗಿ ಪಾಡು ಪಡಬೇಕಾದ ಸ್ಥಿತಿ ಇದೆ.

ಈ ಊರಿನಲ್ಲಿ ಕೃಷಿಗೆ ಸಂಬಂಧಿಸಿದವರನ್ನು ಬಿಟ್ಟರೆ ಇತರ ಉದ್ಯೋಗಿಗಳಲ್ಲಿ ಸರ್ಕಾರಿ ನೌಕರರು ಗಮನಾರ್ಹರಾಗುತ್ತಾರೆ. ಉಜ್ಜಿನಿಯಲ್ಲಿ ಈಗಲೂ ಇರುವವರು ಉದ್ಯೋಗ, ಕುಟುಂಬ ಮೊದಲಾದ ಕಾರಣಗಳಿಗಾಗಿ ಬೇರೆ ಕಡೆ ಇರುವವರು ಇವರೆನ್ನೆಲ್ಲ ಗಮನಿಸಿ ಹೇಳುವುದಾದರೆ ಇವರಲ್ಲಿ ಆಫೀಸ್ ಜವಾನರಿಂದ ವಿಶ್ವವಿದ್ಯಾಲಯದ ಪ್ರೊಫೆಸರ್‌ವರೆಗೆ, ಡಾಕ್ಟರು, ಇಂಜಿನಿಯರ್, ಲಾಯರ್, ಶಿಕ್ಷಕರು, ಛಾಯಗ್ರಹಕರು, ಗುಮಾಸ್ತ, ಪೋಲೀಸ್, ಮಿಲಿಟರಿ, ಕಾರ್ಖಾನೆ ನೌಕರ, ಅಧಿಕಾರಿ ಈ ಮೊದಲಾದ ಹುದ್ದೆಗಳಲ್ಲಿದ್ದಾರೆ. ಇದರಲ್ಲಿ ಶಿಕ್ಷಕರದೇ ಮೇಲುಗೈ. ಇವರಲ್ಲದೆ ಖಾಸಗಿ ವಲಯಗಳಲ್ಲಿ ದುಡಿಯುತ್ತಿರುವವರು ಡ್ರೈವರ್, ಕಂಡಕ್ಟರ್, ಮನೆಗೆಲಸದವರು ಈ ಮೊದಲಾದ ವಿವಿಧ ಕೆಲಸಗಳಲ್ಲಿ ಹಂಚಿಹೋಗಿದ್ದಾರೆ. ಬಿಲ್ಡಿಂಗ್ ಕಂಟ್ರಾಕ್ಟರ್, ಶಾಖಾ ಮ್ಯಾನೇಜ್‌ಮೆಂಟ್, ಚಿಲ್ಲರೆ ಅಂಗಡಿ, ಕ್ಯಾಸೆಟ್ ಅಂಗಡಿ, ಕಿರಾಣಿ ಅಂಗಡಿ, ಹಣ್ಣು ತೆಂಗಿನಕಾಯಿ ಅಂಗಡಿ ಇತ್ಯಾದಿ ಸ್ವಯಂ ಉದ್ಯೋಗಗಳಲ್ಲಿ ತೊಡಗಿರುವವರೂ ಉಂಟು. ಇವರೆಲ್ಲಿ ಬಹಳ ಜನ ಊರ ಹೊರಗೆ ಇರುವುದರಿಂದ, ಅವರಿಂದ ತನ್ನ ಊರು ಹೊರಗೆ ಇರುವುದರಿಂದ, ಅವರಿಂದ ತನ್ನ ಊರ ಮನೆಯವರಿಗೆ ಆರ್ಥಿಕ ಸಹಾಯ ದೊರೆಯುವುದು ಉಂಟು. ತೀರಾ ಕೆಲವರು ತಮ್ಮ ಮನೆಯ ಖರ್ಚು ವೆಚ್ಚಗಳನ್ನು ನೋಡಿಕೊಳ್ಳುವುದರಿಂದ ಅವರ ಕುಟುಂಬಗಳು ಸುಧಾರಿಸಿವೆ. ಇನ್ನು ಕೆಲವರು ಬಡ್ಡಿ ವ್ಯವಹಾರ ದಲ್ಲಾಳಿ ವ್ಯಾಪಾರ ಇತ್ಯಾದಿ ಹವ್ಯಾಸವಾಗಿ ಜೀವನ ನಡೆಸುವವರು ಇದ್ದಾರೆ. ಕೆಲವರು ಮರ ಕೊರೆದು ಮನೆಯ ಮುಟ್ಟುಗಳನ್ನು ಕೃಷಿಯ ಉಪಕರಣಗಳನ್ನು ಮಾಡುವ ಮರ ಕೊರೆಯುವ ಯಂತ್ರಗಳನ್ನು ಹಾಕಿಕೊಂಡಿದ್ದಾರೆ.

ಕೋರಿಗೆ ಮತ್ತು ಗುತ್ತಿಗೆ ಇವು ಜಮೀನ್ದಾರಿ ಪದ್ಧತಿಯ ನಡವಳಿಕೆಗಳು. ಕೆಲವರಿಗೆ ಯಥೇಚ್ಛ ಭೂಮಿ ಇದ್ದರೂ ಅವರಿಗೆ ಸಾಕಷ್ಟು ದುಡಿಯುವ ಶಕ್ತಿ ಇರುವುದಿಲ್ಲ. ಕೆಲವರು ದುಡಿಯುವ ಸಾಮರ್ಥ್ಯ ಹೊಂದಿದ್ದರೂ ದುಡಿಯಲು ಜಮೀನು ಹೊಂದಿರುವುದಿಲ್ಲ. ಅಂಥವರ ನಡುವೆ ಈ ಒಪ್ಪಂದಗಳು ನಡೆಯುತ್ತವೆ.

ಜಮೀನ್ದಾರನಿಂದ ಪಡೆದ ಜಮೀನಿನಲ್ಲಿ ಬೇಸಾಯ ಮಾಡಿ, ಬಂದ ಫಸಲಿನಲ್ಲಿ ಅದಕ್ಕೆ ಆದ ಗೊಬ್ಬರದ ಖರ್ಚು ತೆಗೆದು ಉಳಿದದ್ದರಲ್ಲಿ ಇಬ್ಬರೂ ಸಮಭಾಗ ಮಾಡಿಕೊಳ್ಳುವುದನ್ನು ಕೋರಿಗೆ ಕೊಡುವುದು ಎನ್ನುತ್ತಾರೆ. ಇದಕ್ಕೆ ಬದಲು ತಾನು ಪಡೆದ ಜಮೀನಿನಲ್ಲಿ ಏನನ್ನು ಎಷ್ಟು ಬೇಕಾದರೂ ಬೆಳೆದುಕೊಂಡರು ಮೊದಲೇ ನಿಗದಿಯಾದಷ್ಟು ಹಣವನ್ನು ಕಾಳನ್ನು, ಮಾಲೀಕನಿಗೆ ಕೊಡುವುದು ಗುತ್ತಿಗೆ ಎನಿಸಿಕೊಳ್ಳುತ್ತದೆ. ನೀರಾವರಿಯಲ್ಲಿ ಎಕರಿಗೆ ೩೦೦೦ ಅಥವಾ ಇಂತಿಷ್ಟು ಕಾಳುನ್ನು ಕೊಡಬೇಕಾಗುತ್ತದೆ. ಕೋರಿಗೆಯಲ್ಲಿ ಲಾಭ ನಷ್ಟ ಇಬ್ಬರಿಗೂ ಸಮನಾದರೆ ಗುತ್ತಿಗೆಯಲ್ಲಿ ಲಾಭ ನಷ್ಟ ಏನಾದರೂ ಶ್ರಮಿಕನದೆ ಆಗಿರುತ್ತದೆ.

ಹಿಂದೆ ಹಣಕ್ಕೆ ಹೆಚ್ಚು ಬೆಲೆ ಇದ್ದಾಗ ಸ್ತ್ರೀಯರಿಗೆ ಹಣ ಸಿಕ್ಕುವುದು ದುಸ್ತರವಾಗಿದ್ದು ತಮ್ಮ ಕೆಲವು ವೈಯಕ್ತಿಕ ಬೇಡಿಕೆಗಳಿಗಾಗಿ ಅತ್ತೆ, ಮಾವ, ಗಂಡು ಮಕ್ಕಳು ಅಂಗಡಿಗಳಿಗೆ ರಾಗಿ-ಭತ್ತ ಇತ್ಯಾದಿ ಮಾರುತ್ತಿದ್ದುದುಂಟು. ಈಚೆಗೆ ಅವೆಲ್ಲಾ ಕಡಿಮೆಯಾಗಿವೆ. ಸರ್ಕಾರ ಈಚೆಗೆ ವಿಧವೆಯರಿಗೆ, ವೃದ್ಧರಿಗೆ ಪಿಂಚಣಿ ಹಣದಿಂದಾಗಿ ಕೈ ಕಸಬುಗಳಿಂದ ಸ್ವಲ್ಪ ಹಣ ಕಾಣುವಂತಾಗಿದೆ.

## ಈ. ಶೈಕ್ಷಣಿಕ ಸ್ಥಿತಿ

ಕರ್ನಾಟಕದಲ್ಲಿ ವೀರಶೈವ ಮಠಗಳು ಶಿಕ್ಷಣ ರಂಗಕ್ಕೆ ನೀಡಿದ ಕೊಡುಗೆಗಳು ಮಹತ್ವದಾಗಿದೆ. ಪಂಚಪೀಠಗಳಲ್ಲಿ ಒಂದಾದ ಉಜ್ಜಿನಿ ಸದ್ಧರ್ಮ ಪೀಠವು ಸಹಿತ ಶಾಲ ಕಾಲೇಜುಗಳನ್ನು ನಡೆಸುವುದರೊಂದಿಗೆ ಶೈಕ್ಷಣಿಕ ಕ್ಷೇತ್ರದಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿದೆ. ಜೊತೆಗೆ ಉಜ್ಜಿನಿಯನ್ನು ಸುತ್ತಲೂ ಊರುಗಳಿಗೆ ಶೈಕ್ಷಣಿಕ ಕೇಂದ್ರವಾಗಿಯೂ ಗುರುತಿಸಿಕೊಂಡಿದೆ. ಇದಕ್ಕೆ ಕಾರಣರಾದವರು ಸಮಾಜ ಚಿಂತಕರು ಆಗಿದ್ದ ಲಿಂಗೈಕ್ಯ ಪೂಜ್ಯ ಶ್ರೀ ಸಿದ್ಧಲಿಂಗ ಜಗದ್ಗುರುಗಳು. ಜನರಲ್ಲಿ ಧರ್ಮ ಜಾಗೃತಿಯನ್ನು ಬೆಳೆಸುವುದರ ಜೊತೆಗೆ ಶೈಕ್ಷಣಿಕ ಜಾಗೃತಿಯನ್ನು ಉಜ್ಜಿನಿಯಲ್ಲಿ ಬೆಳೆಸುವುದಕ್ಕೋಸಕ್ಕರ ಸದ್ಧರ್ಮ ಪೀಠದಿಂದಲೇ ಜ್ಞಾನಗುರು ವಿದ್ಯಾಪೀಠವೆಂಬ ಶೈಕ್ಷಣಿಕ ಸಂಸ್ಥೆಯನ್ನು ಸ್ಥಾಪಿಸಿ, ಈ ಸಂಸ್ಥೆಯ ಮೂಲಕ ನಾಡಿನ ಬಡಮಕ್ಕಳಿಗೆ ಸಂಸ್ಕೃತ, ಕನ್ನಡ, ಇಂಗ್ಲೀಷ್ ಭಾಷೆಗಳಲ್ಲಿ ಶಿಕ್ಷಣವನ್ನು ನೀಡುವುದರ ಮೂಲಕ ಶೈಕ್ಷಣಿಕ ಪ್ರಚಾರ ಕಾರ್ಯ ಕೈಗೊಳ್ಳಬೇಕು ಎನ್ನುವ ಮನೋಭಿಲಾಷೆಯನ್ನು ಶ್ರೀ ಸಿದ್ದೇಶ್ವರ ರಾಜದೇಶಿ ಕೇಂದ್ರ ಶಿವಾಚಾರ್ಯ ಸ್ವಾಮಿಗಳು ೧೯೪೭ರಲ್ಲಿ ಶ್ರೀ ಜಗದ್ಗುರು ಉಜ್ಜಿಯಿನಿ ಸದ್ಧರ್ಮ ಸಿಂಹಾಸನ ಜ್ಞಾನ ಗುರು ವಿದ್ಯಾಪೀಠವನ್ನು ಸ್ಥಾಪಿಸಿ. ತಮ್ಮ ಗುರುಗಳ ಉಜ್ಜಿನಿಯ ಜನತೆಯ ಆಸೆಯನ್ನು ಈಡೇರಿಸಿದರು. ಜ್ಞಾನಗುರು ವಿದ್ಯಾಪೀಟಕ್ಕೆ ತನ್ನದೇ ಆದಂತಹ ನೆಲೆಯನ್ನು ತೋರಿಸಿದ ನಂತರ ಪ್ರಾಥಮಿಕ ಹಂತವಾಗಿ ಉಜ್ಜಿನಿಯಲ್ಲಿ ಸಂಸ್ಕೃತ ಪಾಠಶಾಲೆಯನ್ನು ಪ್ರಾರಂಭಿಸುವುದರೊಂದಿಗೆ ವಿದ್ಯಾಪೀಠದ ಶೈಕ್ಷಣಿಕ ಕಾರ್ಯ ಪ್ರಾರಂಭವಾಯಿತು. ಸಂಸ್ಕೃತ ಪಾಠಶಾಲೆಯಿಂದ ಪ್ರಾರಂಭವಾದ ಕಾರ್ಯವನ್ನು ಪ್ರಗತಿ ಪತೆದತ್ತ ಸಾಗಿಸಲು ಚಾಲನೆ ನೀಡಿದವರು ಮರುಳಾರಾಧ್ಯ ಶಿವಾಚಾರ್ಯ ಸ್ವಾಮಿಗಳು. ಸುತ್ತಮುತ್ತಲಿನ ಬಡಜನರ ಅನುಕೂಲಕ್ಕೋಸ್ಕರ ೧೯೬೩ರಲ್ಲಿ ಮಠದಲ್ಲಿಯೇ ಪ್ರೌಢಶಾಲೆಯನ್ನು ಪ್ರಾರಂಭಿಸಿದರು. ಹಾಗೂ ಜಾತಿ, ವರ್ಗಭೇದವೆನ್ನದೆ ಎಲ್ಲಾ ಮಕ್ಕಳು ಸಂಸ್ಕೃತವನ್ನೂ ಕಲಿಯುವಂತಾಯಿತು. ನಂತರ ಸರ್ಕಾರಿ ಪ್ರಾಥಮಿಕ ಶಾಲೆಗಳು ಆರಂಭವಾದವು. ಇದರಿಂದ ಉಜ್ಜಿನಿಯ ಬಡಜನರಿಗೆ ಇನ್ನೂ ಅನುಕೂಲವಾಯಿತು.

ಹಿಂದೆ ಜಮೀನಾದಾರರ ಮಕ್ಕಳು ಬಂಡವಾಳಶಾಹಿಗಳು ಮಾತ್ರ ಶಿಕ್ಷಣವನ್ನು ಕಲಿಯುತ್ತಿದ್ದರು. ಬಡಜನರು, ಪರಿಶಿಷ್ಟಜಾತಿ, ಪರಿಶಿಷ್ಟ ವರ್ಗಗಳಂತೂ ಶಿಕ್ಷಣವನ್ನು ಕಲಿಯುವುದು ದುಸ್ತರವಾದ ಮಾತಾಗಿತ್ತು. ಆದರೆ ಉಜ್ಜಿನಿಯಲ್ಲಿ ಈಗ ಆ ರೀತಿಯ ಯಾವ ಹಿಂದಿನ ಪದ್ಧತಿಗಳು ಉಳಿದಿಲ್ಲ. ಊರಿನ ಎಲ್ಲಾ ವರ್ಗದವರು ಉನ್ನತ ಶಿಕ್ಷಣ ಪಡೆಯುವುದರಲ್ಲಿ ಯಶಸ್ವಿಯಾಗಿದ್ದಾರೆ ಅದಕ್ಕೆ ಕಾರಣ

ಸುತ್ತಮುತ್ತಲಿನ ಹಳ್ಳಿಗಳ ಸರ್ಕಾರಿ ನೌಕರ ಸಂಖ್ಯೆ ಉಜ್ಜಿನಿಯ ನೌಕರರ ಸಂಖ್ಯೆಯನ್ನು ಗಮನಿಸಿದರೆ ಉಜ್ಜಿನಿ ಗ್ರಾಮಕ್ಕೆ ಪ್ರಥಮ ಸಾಲಿನಲ್ಲಿ ನಿಲುತ್ತದೆ. ಹರಿಜನ, ಕುರುಬ, ನೇಕಾರರು, ನಾಯಕರು, ಚಲವಾದಿಗಳು ಎಲ್ಲಾ ಹಿಂದುಳಿದ ವರ್ಗದವರು ಪೋಲಿಸರಿಂದ ಪ್ರೊಫೆಸರ್ ಹುದ್ದೆಯನ್ನು ಅಲಂಕರಿಸಿದ್ದಾರೆ. ಇದಕ್ಕೆ ಕಾರಣ ಇಲ್ಲಿರಿವ ಶಾಲಾ ಕಾಲೇಜುಗಳು ವಸತಿ ನಿಲಯಗಳೇ ಸಾಕ್ಷಿ ನುಡಿಯುತ್ತವೆ.

೧. ಅಂಗನವಾಡಿಗಳು ಎರಡು. (ಕ್ಯಾಟೀಯಲ್ಲಿ ಮತ್ತು ಪ್ಯಾಟೆಯಲ್ಲಿ)

೨. ಸರಕಾರಿ ಹಿರಿಯ ಮಾದರಿ ಶಾಲೆ.

೩. ಸರಕಾರಿ ಹಿರಿಯ ಬಾಲಕೀಯರ ಶಾಲೆ.

೪. ಸರಕಾರಿ ಹಿರಿಯ ಮರುಳುಸಿದ್ಧೇಶ್ವರ ಶಾಲೆ.

೫. ಸರಕಾರಿ ಉರ್ದು ಶಾಲೆ.

೬. ಸರಕಾರಿ ಹಿರಿಯ ಪ್ರಾಥಮಿಕ ಶಾಲೆ. (ಕ್ಯಾಪಿನಲ್ಲಿ)

೭. ಉಜ್ಜಿಯಿನಿ ಜಗದ್ಗುರು ಸಂಯುಕ್ತ ಪದವಿ ಪೂರ್ವ ಕಾಲೇಜು.

೮. ಚೆನ್ನ ಬಸವೇಶ್ವರ ಪ್ರಾಥಮಿಕ ಶಾಲೆ.

ವಸತಿ ನಿಲಯಗಳು :

೧. ಅನಾಥ ಮಕ್ಕಳ ವಸತಿ ನಿಲಯ.

೨. ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದ ಹಾಸ್ಟೆಲ್.

೩. ಅಲ್ಪ ಸಂಖ್ಯಾತರ ವಸತಿ ವಿದ್ಯಾರ್ಥಿನಿಲಯ.

೪. ಬಿ.ಸಿ.ಯಂ. ಹಾಸ್ಟೆಲ್.

ಈ ರೀತಿಯಾಗಿ ಬೆಳೆದ ಉಜ್ಜಿನಿಯ ಶೈಕ್ಷಣಿಕ ಸ್ಥಿತಿ ತುಂಬ ಉತ್ತಮವಾಗಿದೆ ಮತ್ತು ಪ್ರಗತಿಪರವಾಗಿದೆ.

ಅಡಿ ಟಿಪ್ಪಣಿ

ಈ ಎಲ್ಲಾ ಮಾಹಿತಿಗಳನ್ನು ಉಜ್ಜಿನಿ ಜನಪದರಿಂದ ತಿಳಿದುಕೊಂಡಿದೆ. ಶಾಲಾ ಕಾಲೇಜು, ಹಾಸ್ಟೆಲ್‌ಗಳ ಮಾಹಿತಿ ಉಜ್ಜಿನಿ ಗ್ರಾಮ ಪಂಚಾಯ್ತಿಯಿಂದ ಸಂಗ್ರಹಿಸಲಾಗಿದೆ.

## ಅಧ್ಯಾಯ ೫

# ಉಜ್ಜನಿ ಗ್ರಾಮದ ಆಚರಣೆಗಳು

### ಅ. ರೂಢಿ ಪದ್ಧತಿ ಉತ್ಸವ

'ಹಬ್ಬ' ಎಂಬ ಪದವು ಸಂಸ್ಕೃತದ 'ಪರ್ವನ್' ಶಬ್ದದ ರೂಪ, 'ಪರ್ವ' ಅಂದರೆ ಒಂದು ಮತ್ತೊಂದರ ಜೊತೆಗೆ ಸಂಧಿಸುವುದು ಎಂದರ್ಥ. ಸೂರ್ಯ ಚಂದ್ರ ದಿಕ್ಕು ಬದಲಾಗುವುದೇ 'ಪರ್ವ'. ಅದನ್ನೇ ನಮ್ಮ ಪೂರ್ವಜರು ಅಮವಾಸ್ಯೆ. ಹುಣ್ಣಿಮೆಗಳೆಂದು ಹೆಸರಿಸಿದಂತೆ ಕಾಣುತ್ತದೆ. ಮಾನವ ತನ್ನ ಬಯಕೆ ಇಲ್ಲವೇ, ಸಂಕಲ್ಪವೃತ ಆ ಇಚ್ಛೆಯ ಈಡೇರಿಕೆಗಾಗಿ ಒಂದು ಸೀಮಿತವಾದ ಅವಧಿಯಲ್ಲಿ ಕೈಗೊಳ್ಳುವ ಹರಕೆ, ರೂಢಿ, ಸಂಪ್ರದಾಯ, ಆಚರಣೆ ಉತ್ಸವಗಳೇ ಹಬ್ಬಗಳಾಗಿ ಬಂದಿವೆ. ಮಹಾಕವಿ ಕಾಳಿದಾಸ ತನ್ನ ವಿಕ್ರಮೋರ್ವಶೀಯಾ ಕೃತಿಯಲ್ಲಿ 'ಉತ್ಸವ ಪ್ರಮಾಣ ಮನುಷ್ಯ' ಎಂದು ಹೇಳಿದ್ದನ್ನು ನೋಡಿದರೆ ಮಾನವ ಐಹಿಕ, ಸುಖ ಸಂತೋಷ ಹಾಗೂ ಮುಕ್ತಿ ಸಾಧನೆಗಾಗಿ 'ಹಬ್ಬ' ಆಚರಣೆಯಲ್ಲಿ ಬಂದಂತೆ ತೋರುತ್ತದೆ. ಸೃಷ್ಟಿ ಕರ್ತನಾದ ಶಿವನ ಪ್ರಪಂಚದ ಸ್ಥಿತಿಗೆ ಗ್ಲಾನಿಯುಂಟಾದಾಗ ನಾನಾ ರೂಪಗಳಿಂದ ಅವರಿಸಿ ಬಂದ ಸಮಯದಲ್ಲಿ ಅವನ ರೂಪವನ್ನು ಸ್ಮರಿಸಿ ಅವನಿಗೆ ಎಲ್ಲರೂ ಯಥಾ ಶಕ್ತಿ ಕೃತಜ್ಞತೆ ಅರ್ಪಿಸುವರು.

ಈ ತೆರನಾದ ಸಮಾರಂಭದ ದಿನಗಳನ್ನು ಜನಪದರು ಹಬ್ಬ-ಹರಿದಿನಗಳೆಂದು ಕರೆಯುತ್ತಾ ಬಂದಿರಬೇಕು. ಮಾನವ ತನ್ನ ನಿತ್ಯ ಲೌಕಿಕ ಜೀವನದಿಂದ ಅಲೌಕಿಕ ಜೀವನದತ್ತ ಮುನ್ನೆಡೆಯಲು ಸನಾತನವಾಗಿ ಆಚರಿಸುತ್ತಾ ಬಂದ ಈ ಹಬ್ಬಗಳು ಸಹಾಯಕವಾಗಿವೆ. ಹೀಗಾಗಿ ಹಬ್ಬದ ದಿನವೆಂದರೆ ಪವಿತ್ರ ದಿನವಾಗಿದೆ. ಅದನ್ನು ಬಡವ, ಬಲ್ಲಿದರೆಲ್ಲರೂ ಹರುಷದಿಂದ ಆಚರಿಸುತ್ತಾ ಬಂದಿದ್ದಾರೆ. ಸಾಮಾನ್ಯವಾಗಿ ಇತರ ಕಡೆಗಳಲ್ಲೆಲ್ಲಾ ಹಿಂದೂ ಮುಸಲ್ಮಾನರು ಆಚರಿಸುವ ಹಬ್ಬಗಳನ್ನು ಉಜ್ಜನಿಯಲ್ಲಿಯೂ ಆಚರಿಸುತ್ತಾರೆ. ಆದರೆ ಆಚರಣಾ ರೀತಿಯಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಕಂಡು ಬರಬಹುದು. ಕಡ್ಡಾಯವಾಗಿ ತುಂಬ ವೈಶಿಷ್ಟ್ಯ ಪೂರ್ಣವಾಗಿ ಆಚರಿಸುತ್ತಾ ಬಂದಿರುವ ಹಬ್ಬಗಳೆಂದರೆ ಯುಗಾದಿ, ಕಾರಹುಣ್ಣಿಮೆ, ನಾಗರ ಪಂಚಮಿ, ದಸರಾ, ದೀಪಾವಳಿ, ಎಳ್ಳಮಾವಾಸೆ, ಮೊಹರಂ ಹಾಗೂ ಹೋಳಿ, ಮರುಳ ಸಿದ್ದೇಶ್ವರನ ರಥೋತ್ಸವ, ಕಾರ್ತಿಕ ಶಿಖರಕ್ಕೆ ಎಣ್ಣೆ ಎರೆಯುವುದು ಇತ್ಯಾದಿ. ಸಾವಿರಾರು ಭಕ್ತಾಧಿಗಳು, ಈ ಧಾರ್ಮಿಕ ಎಣ್ಣೆ ಎರೆಯುವ ಸಂದರ್ಭದಲ್ಲಿ ಸೇರಿರುತ್ತಾರೆ. ಮುದುಕರು, ತರುಣರು ಸೇರಿ ಶಿಖರಕ್ಕೆ ಹತ್ತಿ ಎಣ್ಣೆಯನ್ನು ಎರೆಯುತ್ತಾರೆ. ಒಂದು ವಿಶೇಷವೇನೆಂದರೆ ಈ ಕಾರ್ಯ ಯಾವ ದಿನ?, ೩.೫೦ ರಿಂದ ೪ ಗಂಟೆಯ ಸಮಯದಲ್ಲಿ ಜರುಗುತ್ತದೆ. ಅಂದಿನ ದಿನ ವರುಣನ

ಕೃಪೆಯಾಗುವುದಂತೂ ನಿಜ, ಸತ್ಯ. ನಾವೆಲ್ಲರೂ ಚಿಕ್ಕವರಾಗಿದ್ದಾಗಲೂ ನೋಡಿದ್ದೇವೆ. ಮಳೆಯಂತೂ ಬಂದೇ ಬರುತ್ತದೆ. ಅಂದು ಜರಮಲಿಯ ನಾಯಕರು ಕ್ಷಾತ್ರ ವೃತ್ತಿಯಾಗಿದ್ದರೂ ಬೇಡರು ಆಗಿದ್ದರು. ಮದ್ಯ-ಮಾಂಸಾದಿಗಳನ್ನು ಸೇವಿಸುವುದಿಲ್ಲ. ವೀರಶೈವ ಧರ್ಮಾಚರಣೆಯಲ್ಲಿ ಇಂದಿಗೂ ಈ ಪಾಳೇಯಗಾರರು ಇದ್ದಾರೆ. ಸ್ನಾನ, ಪೂಜಾಧಿಗಳಿಲ್ಲದೆ ಉಟೋಪಚಾರಗಳನ್ನು ಮಾಡುವುದಿಲ್ಲ. ಗುರುಗಳ ಆರ್ಶೀವಾದ ಪತ್ರ ತಲುಪಿದ ನಂತರವೇ ಇವರಿಗೆ ಸಮಾಧಾನ.

## ಆ. ಹಬ್ಬ ಹರಿದಿನಗಳು, ಉತ್ಸವ

### ಯುಗಾದಿ

'ಯುಗಾದಿ' ಎಂಬ ಸಂಸ್ಕೃತ ಪದದ ತದ್ಭವ ರೂಪವೇ 'ಉಗಾದಿ' ಸಂಸ್ಕೃತದಲ್ಲಿ 'ಯುಗ' ಎಂದರೆ ವರ್ಷ. ಆದಿ ಎಂದರೆ ಆರಂಭ ಎಂದರ್ಥ. ಆದ್ದರಿಂದ ಯುಗ+ಆದಿ-ಯುಗಾದಿ, ಯುಗಾದಿ ಎಂದರೆ ವರ್ಷಾರಂಭ ಅದು ಎಲ್ಲದಕ್ಕೂ ಹೊಸದಿನ. ನಿಸರ್ಗದಲ್ಲಿಯೂ ಗಿಡ, ಮರ ಚಿಗಿತು. ಹೊಸ ಜೀವಕಳೆ ಬಂದಂತಾಗುತ್ತದೆ. ಹೀಗಾಗಿ ನಮ್ಮ ಹಿಂದೂಗಳು ಕೂಡಾ ಯುಗಾದಿಯನ್ನು ಹೊಸ ವರ್ಷವೆಂದು ಭಾವಿಸಿ ಅದನ್ನೊಂದು ಹಬ್ಬವನ್ನಾಗಿ ಆಚರಿಸುತ್ತಾರೆ.

'ಉಗಾದಿ ಉದ್ರಿ' ಎಂಬುದು ಜನಪದರಲ್ಲಿ ಬಹಳ ಪ್ರಚಲಿತವಿರುವ ಮಾತು, ಮತ್ತೊಂದು "ಉಗಾದಿತಂಕ ಬರ್ತ್ಾ ಉಗಾದಿ ಆದಮ್ಯಾಲ ಅರ್ಕ" ಉಗಾದಿ ಬಂತೆಂದರೆ 'ಕಿರಾಣಿ ಅಂಗಡಿ', 'ಬಟ್ಟೆ ಅಂಗಡಿ', 'ಹೋಟೆಲ್ ಬಾಕಿ', ಮೊದಲಾದವುಗಳ ಹಳೆ ಬಾಕಿ ಕೊಡುವುದು. ಹೊಸ ಹೊಸದಾಗಿ ಸಾಲ ಕೊಡುವುದು, ಪಡೆಯುವುದು. ಹೊಸ ಅಂಗಡಿಯನ್ನು ತೆರೆಯುವುದು. ಮನೆ ಕಟ್ಟಿಸುವುದು. ಗುಡಿಯ ಜೀರ್ಣೋದ್ಧಾರ ಮಾಡುವುದು ಹಲವಾರು ಶುಭ ಕಾರ್ಯಗಳನ್ನು ಈ ಯುಗಾದಿ ಹಬ್ಬದ ಸಂದರ್ಭದಲ್ಲಿ ಜರುಗುತ್ತವೆ.

ಜನಪದರಿಗೆ ಬಿಡುವಿನ ದಿನಗಳೆಂದರೆ ಹೆಚ್ಚು ಯುಗಾದಿ ಹಬ್ಬದ ಸಂದರ್ಭದ ದಿನಗಳೆನ್ನಬೇಕು. ಏಕೆಂದರೆ ಹಿಂಗಾರಿ ಬೆಳೆಗಳ ಸುಗ್ಗಿಯಲ್ಲಿ ಮುಗಿದು ನಿಶ್ಚಿಂತನಾಗಿದ್ದಾಗ ಯುಗಾದಿ ದಿಢೀರನೆ ಬಂದು ಬಿಡುತ್ತದೆ. ಹಬ್ಬದ ಮುನ್ನಾ ದಿನ-ಮನೆ-ಮಾರುಗಳಿಗೆ ಸುಣ್ಣ-ಬಣ್ಣ ಬಳಿಯುವುದು, ಗೋಡೆ, ನೆಲಕ್ಕೆ ಸಾರಿಸುವುದು. ಮನೆಯ ಹಾಸಿಗೆ ಹೊದಿಕೆಗಳನ್ನು ನೀರಿನಲ್ಲಿ ಹಾಕಿ ತೊಳೆಯುವುದು. ಬಾಗಿಲು, ಕಿಟಕಿ, ಎತ್ತಿನ ಗಾಡಿಗಳಿಗೆ ಬಣ್ಣ ಹಚ್ಚುವುದು, ಮನೆ ಬಾಗಿಲಿಗೆ ಅಗಸಿ ಎಣ್ಣೆ ಹಚ್ಚಿ, ತಳಿರು-ತೋರಣ ಕಟ್ಟಿ ಶೃಂಗಾರ ಮಾಡುವುದು. ತಮ್ಮ ಸಾಕು ಪ್ರಾಣಿಗಳಾದ ಎತ್ತು, ಆಕಳು, ಎಮ್ಮೆಗಳ ಮೈತೊಳೆಯುವುದು. ಇವೆಲ್ಲ ಅಮವಾಸ್ಯೆಯ ದಿನ ಬಹುಪಾಲು ಎಲ್ಲರೂ ತಮ್ಮ ಕೇರಿಯ, ಮನೆಯ, ಊರ, ಗ್ರಾಮದೇವತೆಗಳ ದೀಪ ಹಚ್ಚಿ, ಕಾಯಿ ಒಡೆದು, ಜೋಳದ ಬಾನ ಹಿಡಿಯುತ್ತಾರೆ. ಇದು ಉಗಾದಿಯ ಮೊದಲ ಘಟ್ಟ.

ಪಾಡ್ಯೆಯ ದಿನ ಉಗಾದಿ ಆಚರಣೆಯ ಎರಡನೇ ಹಂತ ಅಂದು ನಸುಕಿನಲ್ಲಿಯೇ ಎದ್ದು ತಲೆ-ಮೈ, ಕೈತುಂಬ ಎಣ್ಣೆ ಹಚ್ಚಿಕೊಂಡು ಬಿಸಿ ನೀರಿನಲ್ಲಿ ಬೇವಿನ ತೊಪ್ಪಲು ಹಾಕಿಕೊಂಡು ಸ್ನಾನ ಮಾಡುತ್ತಾರೆ. ನಂತರ ಸೊಂಟಕ್ಕೆ ಕಟ್ಟಿಕೊಂಡಿದ್ದ ಹಳೆ ಉಡುದಾರವನ್ನು ಕಳಚಿ, ಹೊಸದಾದ ಉಡುದಾರವನ್ನು ಕಟ್ಟಿಕೊಳ್ಳುತ್ತಾರೆ. ನಂತರ ಕಷ್ಟ ಪಟ್ಟು ದುಡಿದ ಹಣದಿಂದ ಹೊಲಿಸಿಕೊಂಡ ಹೊಸ ಬಟ್ಟೆಗಳನ್ನು ಧರಿಸಿ, ದೇವರು-ದಿಂಡಿರುಗಳನ್ನು ಪೂಜಿಸಿ ಬೇವು, ಬೆಲ್ಲ ಹಂಚಿ ತಿನ್ನುತ್ತಾರೆ. ಬೇವು, ಬೆಲ್ಲವನ್ನು ಅವರವರ ಶಕ್ತ್ಯಾನುಸಾರ ತಯಾರಿಸುತ್ತಾರೆ. ಆದರೆ ತುಂಬಾ ಬಡತನದಲ್ಲಿರುವವರು ಬೇವಿನ ಹೂ, ಬೆಲ್ಲ, ಹುಣಿಸಿ ಹುಳಿಯನ್ನು ಬಿಟ್ಟರೆ ಮತ್ತೇನನ್ನು ಬೆರೆಸುವುದಿಲ್ಲ. ಆದರೆ ಸ್ವಲ್ಪ ಅನುಕೂಲಸ್ಥರು, ಸ್ಥಿತಿವಂತರು, ಬಟಾಣಿ ಓಟ್ಟಿಗೆ ಬೀಸಿದ ಸಕ್ಕರೆಯನ್ನು ಅಥವಾ ಬೆಲ್ಲವನ್ನು, ಬೇವಿನ ಹೂವನ್ನು ಕೂಡಿಸಿ ಪಾಕ ಮಾಡುತ್ತಾರೆ. ಕೆಲವರು ಅದರಲ್ಲಿ ಕೊಬ್ರಿ, ಕಲ್ಲುಸಕ್ಕರೆ ಮತ್ತು ಕಸಕಸಿಯನ್ನು ಬೆರೆಸುವುದುಂಟು. ಇದನ್ನೆಲ್ಲಾ ಬೋಗೋಣಿ ಅಥವಾ ಕುಂಬಾರರ ಮನೆಯಿಂದ ತಂದ ಹೊಸ ಗಡಿಗೆಯಲ್ಲಿ ಹಾಕಿಟ್ಟು ಮನೆಯವರೆಲ್ಲ ಒಂದೊಂದು ಲೋಟ ಕುಡಿಯುತ್ತಾರೆ. ಮನೆಗೆ ಬಂದವರಿಗೂ ಹಾಕಿಕೊಡುತ್ತಾರೆ. ಇದಕ್ಕೆ 'ಬೇವು-ಬೆಲ್ಲ' ಎನ್ನುತ್ತಾರೆ. ಸ್ನಾನ, ಬೇವು ಪಾನ ಮುಡಿಯುವಷ್ಟರಲ್ಲಿ ಹೊತ್ತು ನೆತ್ತಿಗೇರುತ್ತಾ ನೆಲ ಕಾದು ಚುರುಗುಟ್ಟುವ ಬಿಸಿಲು ಪ್ರಾರಂಭವಾಗುತ್ತದೆ. ಅದು ಎಳ್ಳಾಮವಾಸ್ಯೆಗೆ ಎಳ್ಳಕಾಳಷ್ಟು ಅವರಾತ್ರಿಗೆ ಅವರಿಕಾಳಷ್ಟು. ಶಿವರಾತ್ರಿಗೆ ಶಿವಶಿವ, ಉಗಾದಿಗೆ ಉಗಿ ಉಗಿ ಹಾಯುವಂತಿರುತ್ತದೆ ಬಿಸಿಲು. ಮನೆಯಲ್ಲಿ ಹೆಣ್ಣು ಮಕ್ಕಳು ಈ ಮೊದಲು ಬೇಯಿಸಲು ಹಾಕಿದ ಬೇಳೆಯನ್ನೇ ಬಸಿದು, ಕಟ್ಟಿನ ಸಾರು, ಅನ್ನ ಮಾಡಿ, ಬೇಳೆ ರುಬ್ಬಿ, ಹೋಳಿಗೆ ಮೊದಲಾದ ತಿಂಡಿ-ತಿನಿಸುಗಳನ್ನು ತಯಾರಿಸುತ್ತಾರೆ. ಮತ್ತು ಶಿವರಾತ್ರಿಗೂ ಹಿಂದೆಯೇ ಮಾಡಿಟ್ಟ ಶ್ಯಾವಿಗೆಯ ಊಟ ಎಲ್ಲರ ಮನೆಯಲ್ಲಿ ಸರ್ವ ಸಾಧಾರಣವಾಗಿ ಇದ್ದೇ ಇರುತ್ತದೆ.

### ಕಾರಹುಣ್ಣಿಮೆ

ಜನಪದರ ಆಚರಿಸುವ ಪುರುಷ ಪ್ರಧಾನವಾದ ಹಬ್ಬಗಳಲ್ಲಿ ಕಾರಹುಣ್ಣಿಮೆ ಒಂದಾಗಿದೆ. ಕಾರ ಹುಣ್ಣಿಮೆಯ ಆಡು ಮಾತಿನ ರೂಪವೇ ಕಾರು ಹಣ್ಣಿಮೆ. ಹುಣ್ಣಿಮೆಯ ದಿವಸ ಮುಂಜಾನೆ ಸೂರ್ಯೋದಯದೊಂದಿಗೆ ರೈತರ ಕಾರ್ಯ ಚಟುವಟಿಕೆಗಳು ಆರಂಭವಾಗುತ್ತವೆ. ಒಕ್ಕಲುತನದ ಸಲಕರಣೆಗಳಾದ ಕುಂಟಿ, ಕೂರಗಿ, ಎಡೆಕುಂಟೆ, ಮಡಕಿ, ನೇಗಿಲು, ನೊಗ, ಕುಡಾ, ಬಳಿ, ಕೊಡಲಿ, ಕುಡುಗೋಲು, ಗುದ್ಲಿ ಮುಂತಾದವುಗಳನ್ನು ಸ್ವಚ್ಛವಾಗಿ ತೊಳೆದು ಚೀಲದ ತಟ್ಟು ಹಾಸಿ ಮನೆಯ ಮುಂದಿನ ಕಟ್ಟೆಗೆ ಇಡುತ್ತಾರೆ. ಇದು ಒಂದು ನಿಟ್ಟಿನ ಕೆಲಸವಾದರೆ, ಮತ್ತೊಂದೆಡೆಗೆ ಎತ್ತು, ಎಮ್ಮೆ, ದನಕರುಗಳಿಗೆ ಮೈತೊಳೆದು ಬಿಸಿಲಿಗೆ ಕಟ್ಟುತ್ತಾರೆ. ಇನ್ನೊಂದೆಡೆಗೆ ಕಾರುಣಿವಿಗೆ ಮೊದಲೆ ನಾರು ನೂಲಿನಿಂದ ಹೊಸೆಯಲು ಆರಂಭಿಸಿದ ಚಿಲಕಣ್ಣೆ, ಕೊಳಕಣ್ಣೆ, ಗಳೇವು ಮಿಣಿ, ಎಡೆಕುಂಟಿ ಮಿಣಿ, ಮೇಲಗ್ಗ ಮುಗಿಸಿ ಒಂದೊಂದು ತರಹದ ಬಣ್ಣ ಎದ್ದಿ ಬಿಸಿಲಿಗೆ ಹಾಕುತ್ತಾರೆ. ಎತ್ತುಗಳ ಮೈಗೆ ಹಸ್ತದಿಂದ ಗುರುತುಗಳನ್ನು ಹಾಕಿ ಅವುಗಳ ಕೋಡುಗಳಿಗೆ ಬಣ್ಣವನ್ನು ಹಚ್ಚುತ್ತಾರೆ. ಕುಂಚಿ-ಕುಡದ

ಬಳಿ ಮತ್ತು ಉಳ್ಳಾಗಡ್ಡಿಯಲ್ಲಿ ಕೊರೆದ ಚಿತ್ರದಿಂದ ಎತ್ತುಗಳ ಮೈಮೇಲೆ ತರತರಹದ ಚಿತ್ತಾರಗಳನ್ನು ಬಿಡಿಸುತ್ತಾರೆ. ಇದನ್ನು ಇವರು ಬಹಳ ಸಂತೋಷದಿಂದ ಮಾಡುತ್ತಾರೆ. ಎಮ್ಮೆಗಳಿಗೆ ಮಾತ್ರ ಸುಣ್ಣ, ಸುರ ಮಂಜಿನ ಹಸ್ತ ತೆಗೆದು ಒಂದು ಕೋಡಿಗೆ ಸುಣ್ಣ, ಇನ್ನೊಂದು ಕೋಡಿಗೆ ಸುರಮಂಜನ್ನು ಬಳಿಯುತ್ತಾರೆ. ಅದೇ ಸುಣ್ಣ, ಸುರಮಂಜನ್ನು ತೆಗೆದುಕೊಂಡು ಈ ಮೊದಲು ತೊಳೆದಿಟ್ಟ ಒಕ್ಕಲುತನದ ಸಲಕರಣೆಗಳಿಗೆ ಹಚ್ಚುತ್ತಾರೆ. ಜೊತೆಗೆ ದನಕರುಗಳನ್ನು ಕಟ್ಟುವ ಗೂಟ, ಹಗ್ಗ, ಸರಪಳಿಗೆಲ್ಲಾ ಸವರುತ್ತಾರೆ ಮತ್ತು ಮನೆಯ ಬಾಗಿಲುಗಳಿಗೆ ನಾನಾ ಹಸಿರು, ನೀಲಿ ಬಣ್ಣಗಳನ್ನು ಅಗಸಿ ಎಣ್ಣೆಯನ್ನು ಹಚ್ಚಲಾಗುವುದು. ಈ ಯಾವ ಕೆಲಸದಲ್ಲಿಯೂ ಹೆಚ್ಚಾಗಿ ಭಾಗವಹಿಸದೇ ಇದ್ದ ಹೆಂಗಸರು ಮಾತ್ರ ಬೇಳೆ ಹಾಕಿ ಹೊತ್ತು ಮುಳಗುವುದರೊಳಗಾಗಿ ಹೋಳಿಗೆ, ಕರಿಗಡುಬು, ಅನ್ನ, ಸಾರು, ಹಬ್ಬದೂಟ ಸಿದ್ಧಪಡಿಸುತ್ತಾರೆ. ಎತ್ತು, ಆಕಳುಗಳಿಗೆ ಬಾನ ಬೆಳಗಿದ ತರುವಾಯ ಪ್ರತಿಯೊಂದು ಪ್ರಾಣಿಗೂ ಬಾನವನ್ನಿಟ್ಟು ಆಮೇಲೆ ತಾವು ಊಟ ಮಾಡುತ್ತಾರೆ. ಇದು ಕಾರಹುಣ್ಣಿವಿ ಹಬ್ಬದ ಆಚರಣೆ.

ಎಳ್ಳಾಮಾಸಿ

ಒಕ್ಕಲಿಗ ತಾನು ಬೆಳೆಯುವ ಬೆಳೆ ಹಾಗೂ ಭೂ ಮಾತೆಯನ್ನು ಆರಾಧಿಸುವ ಹಬ್ಬಗಳಲ್ಲಿ ಎಳ್ಳಾಮಾಸಿ ಪ್ರಮುಖವಾದುದು. ಬಿಳಿಜೋಳ, ಆಗತಾನೆ ಹೊಡೆಬಿಚ್ಚಿಕೊಂಡು ಸುಂಕಕಟ್ಟಿ ಹಾಲುಗಳ ಹಿಡಿಯುತ್ತಿರುತ್ತದೆ. ಅಮವಾಸ್ಯೆಯ ದಿನದಂದು ಎತ್ತುಗಳು ಮೈತೊಳೆದು ಜೂಲಾ ಹಾಕಿ ಕೋಡಿಗೆ ರಿಬ್ಬನ್, ಗೊಂಡೆ, ಕೋಡಾಂಚು, ಗಗ್ರ ಕಟ್ಟಿ ಅದ್ದೂರಿಯಿಂದ ಶೃಂಗಾರ ಮಾಡಿರುತ್ತಾರೆ. ಎಳ್ಳಾಮಾಸಗೆ ಎಳ್ಳುಕಾಳಿನಷ್ಟು ಬಿಸಿಲು ಪ್ರಾರಂಭವಾಗಿರುವುದರಿಂದ ಗಾಡಿಗೆ ಸವಾರಿ ಕಟ್ಟುತ್ತಾರೆ. ನಸುಕಿನಲ್ಲಿಯೇ ಎದ್ದ ಹೆಂಗಸರು ಎಳ್ಳು ಹಚ್ಚಿದ ರೊಟ್ಟಿ, ಎಣ್ಣೆಗಾಯಿ, ಚಟ್ನಿ. ಹುಳಿಬಾನ, ಹೋಳಿಗೆ, ಕಡಬು, ಅನ್ನ, ಸಾರು, ತಿಂಡಿ-ತಿನಿಸುಗಳನ್ನು ಮಾಡಿರುತ್ತಾರೆ. ಬಿಸಿಲಿಗೆ ಮೊದಲು ಗಾಡಿ ಹೂಡಿ ಬುತ್ತಿ ನೀರು, ಇಟ್ಟುಗೊಂಡು ಸಂಬಂಧಿಕರನ್ನು ಕರೆದುಕೊಂಡು ಹೊಲಗಳಿಗೆ ಹೋಗುತ್ತಾರೆ. ಹೊಲದ ಬಲಭಾಗದ ಮೂಲೆಯೊಂದರಲ್ಲಿ ಗಿಡದ ನೆರಳು ನೋಡಿ ಗಾಡಿನಿಲ್ಲಿಸಿ ಬುತ್ತಿ ನೀರನ್ನು ಬನ್ನಿ ಗಿಡದ ಕೆಳಗೆ ಅಥವಾ ಹೊಲದ ಮೂಲೆಯಲ್ಲಿ ೫ ಚಪ್ಪಟೆಯಾಕಾರದ ಕಲ್ಲುಗಳನ್ನಿರಿಸಿ ಆ ಕಲ್ಲುಗಳಿಗೆ ನೀರು ಚುಮುಕಿಸಿ, ವಿಭೂತಿ, ಕುಂಕುಮ ಹಚ್ಚಿ, ಕಾಯಿ ಹೊಡೆದು ಎಡೆ ಹಿಡಿಯುತ್ತಾರೆ. ಮತ್ತೊಂದೆಡೆಯನ್ನು ಒಬ್ಬರು ಕೈಯಲ್ಲಿ ಹಿಡಿದು ಜೊತೆಗೆ ತಂಬಿಗೆ ಸಾರು ಹಿಡಿದುಕೊಂಡು, ಹೊಲದ ತುಂಬಾ ಉಲಿಗ್ಯೂ, ಉಲಿಗ್ಯೂ ಎಂದು ಆಹಾರವನ್ನು ಭೂ ಮಾತೆಗೆ ಉಣ ಬಡಿಸುತ್ತಾರೆ. ಇದಕ್ಕೆ ಜನಪದರು ಚರಗ ಚಲ್ಲುವುದು ಎಂದು ಕರೆಯುತ್ತಾರೆ.

ನಾಗರ ಪಂಚಮಿ

ಸ್ತ್ರೀ ಪ್ರಧಾನವಾದ ಹಲವಾರು ಹಬ್ಬಗಳಲ್ಲಿ ಜೋಕಾಲಿ ಹಬ್ಬವೂ ಒಂದು. ನಾಗರ ಅಮಾವಾಸ್ಯೆ, ನಾಗರ ಪಂಚಮಿ ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯುವ ಈ ಹಬ್ಬದಲ್ಲಿ ನಾಗಪ್ಪನಿಗೆ ಹಾಲು ಎರೆಯುವುದು, ಹಾಗೂ ಜೋಕಾಲಿ ಪ್ರಮುಖವಾಗಿರುವುದರಿಂದ ನಾಗರ ಪಂಚಮಿ ಅಥವಾ 'ಜೋಕಾಲಿ

ಹಬ್ಬ' ಎಂದೂ ಕರೆಯುವುದು ರೂಢಿ. ನಾಗರ ಪಂಚಮಿ ನಾಡಿಗೆ ದೊಡ್ಡದು ಎಂದು ಜನಪದರು ಹಾಡುತ್ತಾರೆ. ಮದುವೆಯಾಗಿ ಹೋದ ಹೆಣ್ಣು ಮಗಳು

"ಆಷಾಡ ಮಾಸ ಬಂದೀತವ್ವ
ಖಾಸ ಅಣ್ಣ ಬರಲಿಲ್ಲ ಕರಿಯಾಕ"

ಎಂದು ಈ ಪರಿಯಾಗಿ ಸರಿಪಡಿಸಬೇಕಾದರೆ ಇದರ ಹಿನ್ನೆಲೆ ಏನಿರಬೇಕೆಂಬುದನ್ನು ಆಲೋಚಿಸಬೇಕಾಗಿದೆ.

**ನಾಗ ಚೌತಿ**

ಶ್ರಾವಣ ಶುದ್ಧ ಪಂಚಮಿಯ ದಿವಸವೇ ಈ ನಾಗರ ಪಂಚಮಿ ಹಬ್ಬವನ್ನು ಆಚರಿಸುವುದಕ್ಕೆ ಖಚಿತವಾದ ಆಧಾರಗಳು ಸಿಗದೆ ಹೋದರೂ ಜನಪದ ಕಥೆಯೊಂದು ಇದಕ್ಕೆ ಸಾಕ್ಷಿ ನುಡಿಯುತ್ತದೆ.

ರೈತನೊಬ್ಬನು ಹೊಲವಲ್ಲಿ ನೇಗಿಲು ಹೊಡೆಯುತ್ತಿರುವಾಗ ನೇಗಿಲ ಪಾಳಿಗೆ ಸಿಲುಕಿ ಹಾವಿನ ಮರಿಗಳೆಲ್ಲ ಸಾಯಲು ತಾಯಿ ಹಾವು ಸಿಟ್ಟಿಗೆದ್ದು, ಆ ದಿನ ರಾತ್ರಿ ರೈತನನ್ನೊಳಗೊಂಡು ಮನೆ ಮಂದಿಯನ್ನೆಲ್ಲಾ ಕಡಿದು ಸಾಯಿಸಿದರೂ ಅದರ ರೋಷ ಕಡಿಮೆಯಾಗುವುದಿಲ್ಲ 'ಹಾವಿನ ರೋಷ ಹನ್ನೆರಡು ವರುಷ' ವೆಂಬಂತೆ ಸಿಟ್ಟನ್ನಿರಿಸಿಕೊಂಡ ಹಾವು ಪರ ಊರಿನಲ್ಲಿಗೆ ಈ ಮನೆಯ ಹೆಣ್ಣು ಮಗಳೊಬ್ಬಳು ಸೊಸೆಯಾಗಿ ಹೋಗಿದ್ದನು ತಿಳಿದು ಅವಳನ್ನು ಕಚ್ಚಿ ಕೊಲ್ಲಲು ಹೋಯಿತು. ಅದೇ ಸಮಯದಲ್ಲಿ ಆ ಹೆಣ್ಣು ಮಗಳು ಮಣ್ಣಿನ ನಾಗಪ್ಪನನ್ನು ಮಾಡಿ ಹಾಲೆರೆಯುತ್ತಿರುವುದನ್ನು ಕಂಡು ಸಮಾಧಾನವಾಯಿತು. ತಾನು ಆಕೆಯ ತವರು ಮನೆಯಲ್ಲಿ ರೈತನ ಕುಟುಂಬದವರನ್ನೆಲ್ಲಾ ಬದುಕಿಸುವಂತೆ ನಾಗರಾಜನಲ್ಲಿ ಮೊರೆಯಿಡಲು ಅವನಿಗೆ ಕರುಣೆ ಬಂದು ಅಲ್ಲಿಗೆ ಹೋಗಿ ಮತ್ತೆ ವಿಷವನ್ನೆಲ್ಲಾ ಹೀರಿಕೊಂಡು ಎಲ್ಲರನ್ನೂ ಬದುಕಿಸುತ್ತದೆ. ಆಗ ತವರಿಗೆ ಬಂದ ಹೆಣ್ಣು ಮಗಳು ನಾಗಪ್ಪನನ್ನು ಪೂಜಿಸಿ ದಳು. ಅಂದಿನಿಂದಲೇ ನಾಗಪೂಜೆ ಆರಂಭಗೊಂಡು 'ನಾಗ ಚೌವತಿ' 'ನಾಗರ ಪಂಚಮಿ' ಎಂಬ ಹೆಸರು ಆಚರಣೆಯಲ್ಲಿ ಬಂದು ಹಬ್ಬವಾಗಿ ಪರಣಮಿಸಿದೆ. ಈ ಕಾರಣವಾಗಿಯೇ ಹೆಣ್ಣು ಮಕ್ಕಳನ್ನು ತಪ್ಪದೇ ನಾಗರ ಪಂಚಮಿಗೆ ತವರು ಮನೆಗೆ ಕರೆತರುತ್ತಾರೆ ಎಂದು ಉಜ್ಜಿನಿ ಹರಿಜನ ದುರುಗಪ್ಪ ಹೇಳುತ್ತಾರೆ.

ಹಬ್ಬ ಇನ್ನೂ ಎಂಟು-ಹತ್ತು ದಿನವಿದೆ ಎನ್ನುವಾಗಲೇ ಗಂಡನ ಮನೆಗೆ ಹೊಸದಾಗಿ ಹೋದ ಮತ್ತು ಒಂದೆರಡು ಹಡೆದ ಹೆಣ್ಣುಮಕ್ಕಳನ್ನೂ ತಪ್ಪದೇ ತವರು ಮನೆಗೆ ಕರೆತರುತ್ತಾರೆ. ತವರಿಗೆ ಬಂದ ಹೆಣ್ಣುಮಕ್ಕಳೆಲ್ಲ ನಾಗಪ್ಪನ ಪೂಜೆಗಾಗಿ ಎಳ್ಳು ಹುರಿಯುವುದು. ಕರದಂಟು-ಸಕ್ಕರೆ, ಬೆಲ್ಲ-ರವೆ ಹುಂಡಿಗಳನ್ನು ಕಟ್ಟುವುದು. ಕರ್ಚಿಕಾಯಿ ಕರಿಯುವುದು ಮುಂತಾದ ಆಹಾರ ಪದಾರ್ಥಗಳನ್ನು ತಯಾರಿಸುತ್ತಾರೆ. ನಾಗ ಪಂಚಮಿಯ ಮೊದಲ ದಿನ ನಾಗರ ಅಮವಾಸ್ಯೆ ಅದನ್ನು 'ರೊಟ್ಟಿ ಪಂಚಮಿ' ಎನ್ನುವರು. ಎರಡನೇ ದಿನ ನಾಗಚೌತಿ, ಮೂರನೆಯ ದಿನ ನಾಗರ ಪಂಚಮಿ. ಅಮವಾಸ್ಯೆಯ ದಿನ ಬಂಧು-ಬಳಗದೊಂದಿಗೆ ಹೆಣ್ಣು ಮಕ್ಕಳು ಹಣತೆ ಪೂಜೆಯನ್ನು ನೆರವೇರಿಸುವರು. ಎರಡನೇಯ ದಿನವೇ ನಾಗಚೌತಿ, ಅಂದು ಹೆಣ್ಣು ಮಕ್ಕಳೆಲ್ಲಾ ತಲೆಯ ಮೇಲೆ ನೀರು ಹಾಕಿಕೊಂಡು ಹೊಸ ಬಟ್ಟೆಯನ್ನುಟ್ಟು ಸಮೀಪದ ಹುತ್ತಿನಲ್ಲಿಗೆ ಹೋಗಿ ಪೂಜಿಸಿ ಅದೇ ಮಣ್ಣನ್ನು ತಂದು ನಾಗಪ್ಪನನ್ನು ಮಾಡಿ ಔಡಲ

ಇಲ್ಲವೇ ಎಕ್ಕೆಯ ಎಲೆಯಲ್ಲಿ ಇಟ್ಟು ಅರಿಷಣ, ಕುಂಕುಮ, ವಿಭೂತಿ ಹಚ್ಚಿ ಹೂ ಹಾಕಿ ಶೃಂಗಾರ ಮಾಡುವರು. ನಾಗ ಪೂಜೆಯ ಮರುದಿನ ಜೋಕಾಲಿ ಆಡುವ ಸಂಭ್ರಮ. ಸಾಮಾನ್ಯವಾಗಿ ಅಂದು ಹೆಂಗಸರು-ಗಂಡಸರು ಸಣ್ಣ ಹುಡುಗರೆಲ್ಲ ಹೊಸ ಅರಿವೆಯನ್ನುಟ್ಟು ಕೇರಿಯಲ್ಲಿ ದೊಡ್ಡ ದೊಡ್ಡ ಮರದ ಟೊಂಗೆಗಳಿಗೆ ಇಲ್ಲವೆ ಕಂಬ ಸಿಟ್ಟು ಕಟ್ಟಿದ ಅಂತರ ಜೋಕಾಲಿಯನ್ನಾಡಲು ಬರುತ್ತಾರೆ.

ಜೋಕಾಲಿ ಹಬ್ಬ ಒಂದೆಡೆ ಈ ರೀತಿ ಉಂಡು ತಿಂದು ನಡೆಯದಿದ್ದರೆ, ಇನ್ನೊಂದೆಡೆ ಕೆಲವು ಜೂಜಿನಾಟಗಳು, ಶಕ್ತಿ ಪ್ರದರ್ಶನಗಳು ನಡೆದಿರುತ್ತವೆ. ಇವುಗಳೊಂದಿಗೆ ಜೋಕಾಲಿ ಹಬ್ಬ, ನಾಗರ ಪಂಚಮಿ ಮುಗಿದಂತೆ.

## ದಸರಾ ಹಬ್ಬ

ನಮ್ಮ ನಾಡಿನಲ್ಲಿ ತುಂಬಾ ವಿಚಿತ್ರವಾದ ಹಬ್ಬಗಳಿವೆ. ಅಂದರೆ 'ಹೋಳಿಗೆ ತಿಂದು ಹೊಯ್ಕಳೋದು ಹೋಳಿ ಹಬ್ಬ' ಮನಿಕೊಳತಿಂದು ಮಂದಿಕಾಲ ಹಿಡಿಯೋದು ಮಾನವಮಿ ಹಬ್ಬ. ಇದನ್ನು ಬನ್ನಿ, ನವರಾತ್ರಿ, ಮಹಾನವಮಿ ದಸರಾ, ವಿಜಯದಶಮಿ, ನಾಡಹಬ್ಬ ಎಂದೆಲ್ಲಾ ಕರೆಯುತ್ತಾರೆ. ಸಾಮಾನ್ಯವಾಗಿ ಪ್ರತಿ ಹಬ್ಬಕ್ಕೂ ಒಂದು ಪೌರಾಣಿಕ ಇತಿಹಾಸವಿರುವಂತೆ ಬನ್ನಿ ಹಬ್ಬಕ್ಕೂ ಹಿನ್ನೆಲೆಯಿರುವುದು ಜನಪದ ಹಾಡುಗಳಿಂದ ತಿಳಿದುಬರುತ್ತದೆ.

"ಕಲ್ಲ ಕಡಬವ ಮಾಡಿ. ಮುಳ್ಳು ಶ್ಯಾವಿಗೆ ಮಾಡಿ
ಬನ್ನೀ ಎಲಿಯಾಗ ಎಡಿ ಮಾಡಿ ಪಾಂಡವರು
ಉಂಡೋ ಹೋಗ್ಯಾರೋ ವನವಾಸ"

"ಬನ್ನೀಯ ಗಿಡಿದಾಗ ಬಾಣ ಇಟ್ಟೇವಿ ತಾಯಿ
ಯಾರು ಬಂದರೂ ಕೊಡಬ್ಯಾಡ | ಹಡದವ್ವ
ಅರುಜುನ ಬಂದರ ಕೊಡಬೇಕ"

ಎಂಬ ಜನಪದ ತ್ರಿಪದಿಗಳು ಬನ್ನಿ ಪೂಜೆಯ ಪ್ರಾಚೀನತೆಯನ್ನು ಮಹಾಭಾರತದ ಕಾಲಕ್ಕೆ ಒಯ್ಯುತ್ತವೆ. ಮಹಾನವಮಿಯಲ್ಲಿ ಬನ್ನಿ ಗಿಡವನ್ನು ಪೂಜಿಸಿ. ಒಬ್ಬರಿಗೊಬ್ಬರು ಬನ್ನಿಯನ್ನು ಕೂಡುಕೊಳ್ಳುವಿಕೆಯಿಂದ ಬನ್ನಿ ಹಬ್ಬವೆಂದು, ದಸರಾ ಹಬ್ಬ ಎಂದೂ ಕರೆದಿದ್ದಾರೆ.

ಮಹಾಲಯ ಅಮವಾಸ್ಯೆ ಇನ್ನು ಮುಂದೆ ಇರುವಾಗಲೇ ಮನೆ-ಮಾರು ಸಾರಿಸುವುದು. ಹಾಸಿಗೆ-ಹೊದಿಕೆಗಳನ್ನು ಒಗೆಯುವುದು ಮೊದಲಾದ ಕೆಲಸಗಳು ಆರಂಭಗೊಳ್ಳುತ್ತವೆ. ಇದು ಒಟ್ಟು ಒಂಭತ್ತು ದಿನಗಳವರೆಗೆ ನಡೆಯುವ ಹಬ್ಬ. ಆಶ್ವೀಜ ಶುಕ್ಲ ಪ್ರತಿಪದಿ ಪಾಡ್ಯದಿಂದ ಹಿಡಿದು ದಶಮಿಯವರೆಗಿನ ಆಚರಣೆಯಲ್ಲಿ ನಾಲ್ಕು ಹಂತಗಳಾಗುತ್ತವೆ.

ಮೊದಲ ದಿನ ಅಮವಾಸ್ಯೆ, ನಂತರ ಪ್ರತಿಪದ ದ್ವಿತೀಯಾ, ತೃತೀಯಾಗಳೆಂದು ಮೂರು ದಿನ ರೋಗ-

ರುಜಿನ, ದುಃಖ-ದುಮ್ಮಾನಗಳ ಪರಿಹಾರಕ್ಕಾಗಿ ದುರ್ಗಾ ಪೂಜೆಯನ್ನು ಕೈಗೊಳ್ಳುತ್ತಾರೆ. ಎರಡನೆಯದಾಗಿ ಚುತುರ್ಥಿ, ಪಂಚಮಿ, ಷಷ್ಠೀ - ಈ ಮೂರು ಸುಖ-ಸಂಪತ್ತು ಸಮೃದ್ಧಿಗೊಳ್ಳುವಂತೆ ಲಕ್ಷ್ಮೀಯನ್ನು ಆರಾಧಿಸುವರು. ಮೂರನೇಯದಾಗಿ ಸಪ್ತಮಿ, ಅಷ್ಟಮಿ, ನವಮಿ ಈ ಮೂರು ದಿನ ವಿದ್ಯಾ, ಬುದ್ಧಿ ಜ್ಞಾನಗಳು ಹೆಚ್ಚಲೆಂದು ಸರಸ್ವತಿಯನ್ನು ಪೂಜಿಸುವರು. ಹೀಗೆ ಮೂರು ಹಂತಗಳಲ್ಲಿ ಶಕ್ತಿಪೂಜೆ ನಡೆಯುವುದರಿಂದ ಈ ಹಬ್ಬಕ್ಕೆ ನವರಾತ್ರಿ ಮಹಾನವಮಿ ಎಂದು ಕರೆಯುವರು. ನಾಲ್ಕನೇಯದಾಗಿ ಈ ಹಬ್ಬದ ಪರಿಸಮಾಪ್ತಿಯೆಂಬಂತೆ ಬರುವ ಹತ್ತನೇಯ ದಿನವೇ ದಶಮಿ. ಅದನ್ನೇ 'ವಿಜಯದಶಮಿ' ಎನ್ನುತ್ತಾರೆ. 'ದಶಹರ್' ಎಂದರೆ ಹತ್ತು ದಿನಗಳ ರಾತ್ರಿ ಹಬ್ಬವನ್ನು ಆಚರಿಸುವುದರಿಂದ 'ದಸರಾ' ಎಂಬ ಹೆಸರೂ ಬಂದಿದೆ. ದಶಮಿಯ ದಿನದಂದು ಆಯಾ ವೃತ್ತಿಯವರು ತಮ್ಮ ತಮ್ಮ ಸಾಮಗ್ರಿಗಳನ್ನು ಪೂಜಿಸುವರು. ಕೆಲವರು ತಮ್ಮ ಅಂಗಡಿ, ಗಿರಣಿ, ಟ್ರ್ಯಾಕ್ಟರ್, ಟ್ರಕ್ಕುಗಳನ್ನು ಪೂಜಿಸುವರು. ಇದನ್ನು ಆಯುಧ ಪೂಜೆ ಅಥವಾ ಖಂಡ ಪೂಜೆ ಎಂದು ಕರೆಯುವರು. ಮೂರು ಜಂಚೇಲಿ ಆರತಿ ಹಿಡಿದ ಮುತ್ತೈದೆಯರೊಂದಿಗೆ ಊರ ಪ್ರಮುಖರು ಸೇರಿದಂತೆ ಕರಡಿ ಮಜಲು ಮೊದಲಾದವುಗಳೊಂದಿಗೆ ಬನ್ನಿ ಪೂಜೆ ಮಾಡುವರು. ಮನೆಯ ಗ್ರಾಮದೇವತೆಗಳಿಗೆ ಜೋಳದ ದಂಟು, ಮೊಳೆಯ ಕಂಬ ಇಟ್ಟಂತೆ ಇಲ್ಲಿಯೂ ಇಟ್ಟು ಪೂಜಿಸುವರು. ಇಲ್ಲಿ ಪೂಜೆಗೊಂಡವಳು ಬನ್ನಿಮಹಾಂಕಾಳಿಯಾಗುವಳು ಅಲ್ಲಿಯೇ ಎಲ್ಲರೂ ಸಾಮೂಹಿಕವಾಗಿ ಬನ್ನಿ ಮುಡಿದು ಓಣಿಗೆ ಬಂದು ತಮ್ಮ ಸಂಬಂಧಿಕರುಗಳಿಗೆಲ್ಲಾ, ಸ್ನೇಹಿತರಿಗೆ, ಮುಖ್ಯವಾಗಿ ಹಿರಿಯರಿಗೆ ಬನ್ನಿಕೊಟ್ಟು ಕಾಲು ಬೀಳುವುದು, ಕೈ ಮುಗಿಯುವುದು ನಡೆಯುತ್ತದೆ. ಈ ಚಿತ್ರಣ ಜನಪದ ತ್ರಿಪದಯೊಂದರಲ್ಲ ತುಂಬಾ ಸೊಗಸಾಗಿ ಮೂಡಿಬಂದಿದೆ.

"ಬನ್ನಿ ಮುಡಿಯೊಂದು ಬಂತು ಬಂಗಾರ ಕೊಡೋದು ಬಂತು
ಬಂದು ನನಕಾಲ ಹಿಡಿದಾನ| ನನ ತಮ್ಮ
ಬಂಗಾರ ಮೂಲ ನನಗಿರಲಂತ

ಬನ್ನಿ ಹಬ್ಬವೂ ಕೂಡಾ ಜಾತಿ-ಮತದ ಗಡಿಯನ್ನು ಮೀರಿ ಆಚರಿಸಲ್ಪಡುವ ಹಬ್ಬ ಯಾವ ಜಾತಿ, ಲಿಂಗ, ಮನಸ್ಸಿನ ಬೇಧವಿಲ್ಲದೇ ಬನ್ನಿಯನ್ನು ಕೊಟ್ಟು 'ನಾವು ನೀವು ಬಂಗಾರವಾಗಿರೋನ್ರಿ' ಎಂದು ಹೇಳುವ ಒಂದೇ ವಯಸ್ಸಿನವರ ಸ್ನೇಹ, 'ಗಾಡ ಮಕ್ಕಳಾಗ್ರಿ' ಎಂದು ಹರಸುವ ಹಿರಿಯರ ಆರ್ಶೀವಾದ ಬನ್ನಿ ಕೊಟ್ಟು ಬಾಗಿ ಕಾಲು ಹಿಡಿಯುವವರಿಗೆ ಇರ್ಲಿ, ಇರ್ಲಿ ಬಿಡು ಎಂದು ಹೇಳುವ ಹಿರಿಯರ ಸೌಜನ್ಯತೆ ಈ ಹಬ್ಬದ ದಿನ ಮಧ್ಯರಾತ್ರಿಯವರೆಗೂ ನಡೆಯುತ್ತದೆ. ಬನ್ನಿ ಹಬ್ಬ ಕೇವಲ ಒಂದು ಮನೆತನದವರಿಗೆ ಮಾತ್ರ ಸೀಮಿತವಾಗಿರದೆ ಇಡೀ ಊರುನಾಡಿನ ಹೊರಗೆ ಪ್ರೀತಿ, ಪ್ರೇಮ ವಿಶ್ವಾಸ ಹಂಚಿಕೊಂಡು ಹರುಷಪಡುವ ಹಬ್ಬವಾಗಿದೆ.

## ದೀಪಾವಳಿ

ದೀಪಗಳ ಹಾವಳಿಯನ್ನು ತಂದೊಡ್ಡುವ ದೀಪಾವಳಿ ಉಜ್ಜಿನಿ ಜನರು ಆಚರಿಸುವ ನಾಡಹಬ್ಬಗಳಲ್ಲಿ ಒಂದು. 'ಉಂಡದ್ದೇ ಉಗಾದಿ, ಮಿಂದದ್ದೇ ದೀಪಾವಳಿ' ಎಂಬಂತೆ ಮೈಮನವನ್ನು ಬೆಳಗಿಸಿ

ಶುಭ್ರಗೊಳಿಸುವ ಹಬ್ಬವಾಗಿದೆ. ಇತರ ಹಬ್ಬಗಳಲ್ಲಿಯಂತೆ ಈಗಲೂ ಮಡಿ ಮೈಲಿಗೆಯನ್ನು ತಪ್ಪದೇ ಕಾಯ್ದುಕೊಳ್ಳುತ್ತಾರೆ. ಅಮವಾಸ್ಯೆಯ ದಿನ ಮನೆಯ ಒಳು-ಹೊರಗೆ ಸಾಲು ದೀಪಗಳನ್ನು ಹಚ್ಚುತ್ತಾರೆ. ಗಂಡನ ಮನೆಯಿಂದ ಬಂದ ಹೆಣ್ಣುಮಕ್ಕಳು ತಮ್ಮ ಅಣ್ಣ-ತಮ್ಮಂದಿರಿಗೆ 'ಪೀಡೆ' ಹೋಗಿ ಆಯುಷ್ಯ ಹೆಚ್ಚಲೆಂದು ಆರತಿ ಬೆಳಗುತ್ತಾರೆ. ಅದಕ್ಕೆ ಪ್ರತಿಯಾಗಿ ಅಕ್ಕ-ತಂಗಿಯರಿಗೆ, ಸೊಸೆಯರಿಗೆ ಸೀರೆ, ಕುಪ್ಪಸ, ಹಣ, ಬಂಗಾರ, ಅವರ ಶಕ್ತ್ಯಾನುಸಾರ ಕೊಡುವ ಪದ್ಧತಿ ಇದೆ. ಮರುದಿನ ದೀಪಾವಳಿಯ ಪಾಡ್ಯ. ಅಂದು ಲಕ್ಷ್ಮಿಗೆ ಮತ್ತೆ ವಿಶೇಷ ಪೂಜೆ ಇರುತ್ತದೆ. ಕಿರಾಣಿ, ಹೋಟೆಲ್‌ಗಳು, ಅಂಗಡಿಗಳು, ವ್ಯಾಪಾರಸ್ಥರು ಹೆಚ್ಚು ಉಜ್ಜನಿಯಲ್ಲಿ ಇರುವುದರಿಂದ ಇವರ ಪೂಜೆ ಬಹಳ ಅದ್ದೂರಿಯಿಂದ ಜರುಗುತ್ತದೆ. ಇಲ್ಲಿಗೆ ದೀಪಾವಳಿ ಹಬ್ಬದ ವಿಶೇಷತೆ ಮುಗಿದಂತೆ.

### ಮೊಹರಂ

ಮುಸಲ್ಮಾನರ ಹನ್ನೆರಡು ತಿಂಗಳಲ್ಲಿಯ ಮೊದಲ ತಿಂಗಳ ಹೆಸರೇ ಮೊಹರಂ. ಈ ತಿಂಗಳಿನ ಮೊದಲ ಹತ್ತು ದಿನ ಆಚರಿಸುವ ಹಬ್ಬವೇ ಮೊಹರಂ. ಹಬ್ಬವೆಂದು ಹೆಸರಾಗಿದೆ. ಇದು ಮೇಲು ನೋಟಕ್ಕೆ ಮುಸಲ್ಮಾನರ ಹಬ್ಬವಾಗಿದ್ದರೂ ಉಜ್ಜಿನಿಯಲ್ಲಿ ಹಿಂದೂ-ಮುಸಲ್ಮಾನರೆಲ್ಲರೂ ಒಟ್ಟಿಗೆ ಸೇರಿ ವಿಜೃಂಭಣೆಯಿಂದ ಆಚರಿಸುವ ಹಬ್ಬವಾಗಿದೆ.

### ಹಬ್ಬದ ಹಿನ್ನೆಲೆ

ಮಹಮ್ಮದ್ ಪೈಗಂಬರ್‌ರ ತರುವಾಯ ಇಸ್ಲಾಂ ಸಾಮ್ರಾಜ್ಯಕ್ಕೆ ಧರ್ಮ ಪ್ರಭುಗಳನ್ನು (ಖಲೀಫರನ್ನು) ಆಯ್ಕೆ ಮಾಡುತ್ತಾ ಬಂದರು. ಪ್ರಜಾಪ್ರಭುತ್ವದ ಆಧಾರದ ಮೇಲೆ ಆಯ್ಕೆಯಾಗುತ್ತಾ ಬಂದ ಈ ಮುಖಂಡರಲ್ಲಿ ನಾಲ್ಕನೇಯವರು ಹಜರತ್ ಅಲಿ. ಇವನು ಖಲೀಫನೆಂದು ಘೋಷಿಸಿಕೊಂಡನು. ನಂತರ ಇವನ ಮಗ ಯಜೀದನೂ ಇದೇ ರೀತಿ ಮಾಡಿದನು. ಈತನ ದಬ್ಬಾಳಿಕೆಯನ್ನು ತಾಳಲಾರದೇ ಕೆಲವರು ಹಜರತ್ ಅಲಿಯ ಮಗ ಇಮಾಮ್ ಹಸನ್‌ನನ್ನು ಪಟ್ಟಕ್ಕೆ ತರಲು ಪ್ರಯತ್ನಿಸಿದರು. ಆದರೆ ಯಜೀವನು ಮೋಸದಿಂದ ವಿಷಹಾಕಿ ಅವನನ್ನು ಕೊಂದನು. ಹಸನ್ನನ ತಮ್ಮ ಹುಸೇನನ್ನು ಪಟ್ಟಕಟ್ಟಿ ಯಜೀದನ ಸೊಕ್ಕನ್ನು ಮುರಿಯಲು ಹೋರಾಡಿದರು. ಅಧಿಕಾರದ ಆಸೆಗಾಗಿ ಧರ್ಮವಂತರ ವಿರುದ್ಧ ಬಂಡೆದ್ದ ಯಜೀದನಿಗೆ ಹಸಿನ-ಹುಸೇನ ಮತ್ತು ಇವರ ಅನುಯಾಯಿಗಳು ಶರಣಾಗತರಾಗದೇ ಧರ್ಮಕ್ಕಾಗಿ ಹೋರಾಡಿ ವೀರಮರಣವನ್ನಪ್ಪಿದ ದುರಂತ ಕಥೆಯೇ ಇಂದಿನ ಮೊಹರಂ ಹಬ್ಬ ಆಚರಣೆಯಾಗಿದೆ ಎಂದು ಉಜ್ಜಿನಿ ಅಬ್ದುಲ್ ಕಲಾಂರ (ಬಿಲ್ ಕಲೆಕ್ಟರ್) ಹೇಳಿಕೆ.

### ಗುದ್ದಲಿ ಹಾಕುವುದು

ಮೊಹರಂ ತಿಂಗಳು ಆರಂಭಗೊಳ್ಳುವುದಕ್ಕೆ ಮೊದಲೇ ಮುಸ್ಲಿಂರು ತಮ್ಮ ಮನೆಯ ಒಳಹೊರಗು ಸುಣ್ಣ ಬಣ್ಣ ಬಳಿದು ಹಾಸಿಗೆ-ಹೂದಿಕೆಗಳನ್ನು ತೊಳೆದು ಮಡಿ-ಮೈಲಿಗೆಯನ್ನು ಕಾಪಾಡುತ್ತಾರೆ. ಜೊತೆಗೆ ಮಸೀದಿಗೂ ಸುಣ್ಣ ಬಣ್ಣ ಬಳಿಯುತ್ತಾರೆ. ಚಂದ್ರ ಕಂಡ ದಿನ ಮೊಹರಂದ ಕೊನೆ ದಿನವೆಂದು ಪಶ್ಚಿಮಕ್ಕೆ

ಮುಖ ಮಾಡಿ ನಿಂತು ಮುಲ್ಲಾಪಾತೆ ಕೊಡುತ್ತಾನೆ. ಒಬ್ಬರು ಗುದ್ದಲಿಯಿಂದ ಐದಾರು ಕಚ್ಚುಗಳನ್ನು ಹಾಕುತ್ತಾರೆ. ಇದನ್ನೇ ಜಾನಪದ ಭಾಷೆಯಲ್ಲಿ 'ಗುದ್ದಲ ಹಾಕುವುದು' ಎನ್ನುತ್ತಾರೆ. ನಂತರ ಉಳಿದವರು ಗುದ್ದಲಿ ಬಿದ್ದವು ಎಂದು ಹೇಳುತ್ತಾರೆ. ಮರುದಿನ ಮುಜಾವರನನ್ನು ಕರೆದು ಅದೇ ಜಾಗದಲ್ಲಿ ದೊಡ್ಡದಾದ ಕುಣಿ ತೋಡಿ ಸುತ್ತಲೂ ಸೊಂಟದ ಮಟ ಕೆಸರಿನ ಬಂಡಿ ಕಟ್ಟುವರು ಇದಕ್ಕೆ ಅಲಾಯಿ ಕುಣಿ ಎಂದು ಕರೆಯುತ್ತಾರೆ.

**ದೇವರು ಕೂಡುವುದು**

ಮೊಹರಂದ ಐದನೇಯ ದಿನ ಸಾಯಂಕಾಲ ಊರಿನ ಓಣಿ-ಓಣಿಯವರೆಲ್ಲ ವಾದ್ಯ-ಮೇಳದೊಂದಿಗೆ ಹೆಜ್ಜೆ ಇಡುತ್ತಾ ದೇವರನ್ನು ತರುವ ಜಾಗದಲ್ಲಿ ಸೇರುತ್ತಾರೆ. ಮಡಿಯಿಂದ ಬಂದು ಮುಸ್ಲಿಂರು ತಲೆಯ ಮೇಲೆ ಪೀರಾಗಳ ಗಂಟನ್ನು ಹೊತ್ತು "ಹುಸೇನ-ಹುಸೇನಕಿ-ದೋಸ್ತಾರ್ ಹೋದೀನ್", "ಇಲಾಯಿ ಮೋಮ್‌ಧೊಲೋ" ಎಂದು ಧೀನ್ ಹಾಕುತಾ ದೇವರನ್ನು ಕೂಡಿಸುವ ಮಸೀದಿಗೆ ಬರುತ್ತಾರೆ. ಓಣಿಯ ಮಸೀದಿಗಳಲ್ಲಿ ಒಂದೊಂದನ್ನು ಪಂಜೆ ಜೋಡಿಸಿ ಕೂಡಿಸುತ್ತಾರೆ. ಹಸ್ತ ಮತ್ತು ಚಂದ್ರಾಕೃತಿಯಲ್ಲಿ ಈ ದೇವರುಗಳನ್ನು ನೋಡಿದರೆ ಕರ್ಬಲಾ ಕಾಳಗದಲ್ಲಿ ವೀರ ಮರಣವನ್ನು ಅಪ್ಪಿದ ಹುಸೇನ, ಹುಸೇನ, ಅಬ್ಬಾಸಾಲಿ, ಕಾಸೀಮ, ಅವರ ಪರಿವಾರದ ನೆನಪು ತರುವ ಸಂಕೇತಗಳಾಗಿವೆ ಎನಿಸುತ್ತದೆ.

**ಮರುಳಸಿದ್ಧೇಶ್ವರನ ರಥೋತ್ಸವ**

ಉಜ್ಜಿನಿ ಮರುಳಸಿದ್ದೇಶ್ವರ ಜಾತ್ರೆಯು ವೈಶಾಖ ಶುದ್ಧ ೫ ರಂದು ಶ್ರೀ ದಾರುಕ ಜಯಂತಿ ಇರುವುದರಿಂದ ಈ ರಥೋತ್ಸವ ನಡೆಯುವುದು. ಈ ಚಾರಿತ್ರಿಕ ದಿನೋತ್ಸವದಿಂದಲೇ ಈ ಸದ್ಧರ್ಮ ಸಿಂಹಾಸನಾಧೀಶ್ವರರು ಪಂಚಚಾರ್ಯರೆಂಬುದು ವಿಶದವಾಗುತ್ತದೆ. ಏಕೆಂದರೆ ಪರಶಿವನ ೨೮ರಲ್ಲಿ ಒಬ್ಬರಾದ ದಾರುಕರು ಕಲಿಯುಗದಲ್ಲಿ ಮರುಳಾರಾಧ್ಯರೆಂಬ ಅಭಿದಾನದಿಂದ ವಟ ಸಿದ್ದೇಶ್ವರ ಲಿಂಗದಿಂದ ಅವಿರ್ಭವಿಸಿ, ಭೂ ಲೋಕದವರಿಗೆ ಶಿವ ತತ್ವೋಪದೇಶವನ್ನು ಮಾಡಿದರು. ಹಾಗೆ ಆರ್ವಿಸಿದ ಮಹಾದಿನವೇ ವೈಶಾಖ ಶುದ್ಧ ಪಂಚಮಿ ಅದರ ಸಂಕೇತವೇ ಉಜ್ಜಿನಿಯಲ್ಲಿ ನಡೆಯುವ ರಥೋತ್ಸವ, ರಥೋತ್ಸವಕ್ಕಿಂತ ಮೊದಲು ೩-೪ ದಿನಗಳ ಮುಂಚೆಯೇ ಸಿಂಗಾರ ಕಾರ್ಯ ಮಾಡಲಾಗುತ್ತದೆ.

೧. ರಥದ ನಲುವುಗಳನ್ನು ಕಟ್ಟುವುದು.

೨. ರಥವನ್ನು ಸ್ವಚ್ಛಗೊಳಿಸಿ ಎಣ್ಣೆ ಹಚ್ಚುವುದು.

೩. ರಥಕ್ಕೆ ವಿವಿಧ ಬಣ್ಣದ ಪಟಗಳನ್ನು ಕಟ್ಟುವುದು.

೪. ರಥಕ್ಕೆ ನಲುವುಗಳ ಮೇಲೆ ಜಲ್ಲಿಯನ್ನು ಕಟ್ಟುವುದು.

೫. ಜಲ್ಲಿಯ ಮೇಲೆ ಶುಭ್ರವಾದ ಬಟ್ಟೆಯನ್ನು ಕಟ್ಟುವುದು.

೬. ಜಲ್ಲಿಯ ಮೇಲೆ ಕಳಶವನ್ನು ಇದುವುದು.

ಅನಂತರ ದೇವರನ್ನು ತಂದು ರಥೋತ್ಸವ ದಿನದಿಂದ ಸಕಲ ಮರ್ಯಾದೆಯೊಂದಿಗೆ ಬಾಜು ಭಜಂತ್ರಿಗಳಿಂದ ಗೌರವ ಪೂರ್ವಕವಾಗಿ ಪ್ರತಿಷ್ಠಾಪನೆ ನಂತರ ಪಂಚ ಪೀಠಾಧೀಶ್ವರರ ಆಜ್ಞೆ ಹೊರಡಿಸಿದ ನಂತರ ರಥವನ್ನು ಎಳೆಯುವ ಕಾರ್ಯವನ್ನೇ ಸಾವಿರಾರು ಭಕ್ತರು ಭಕ್ತಿ ಗೌರವಗಳಿಂದ ಎಳೆಯುತ್ತಾರೆ. ಎಳೆಯುವುದಕ್ಕಿಂತ ಮುಂಚೆ ರಥದ ಎರಡು ಚಕ್ರಗಳಿಗೆ ತೆಂಗಿನಕಾಯಿ ಹೊಡೆಯುವುದು. ವಿಶೇಷ ಆಚರಣೆ ರಥವು ಮೆಲ್ಲನೆ ಮುಂದೆ ಸಾಗುತ್ತಿದ್ದಂತೆ ಸುರು ಮಲೋ ಮೆಣಸು, ಬಾಳೇ ಹಣ್ಣನ್ನು ರಥಕ್ಕೆ ಎಸೆದು ಭಕ್ತಿ ಪೂರ್ವಕವಾಗಿ ಕೈಮುಗಿದು ತಮ್ಮ ಊರುಗಳಿಗೆ ಭಕ್ತರು ಹೊರಡುತ್ತಾರೆ. ಆದರೆ ರಥವನ್ನು ಎಳೆದೊಯ್ಯುವ ಸಂದರ್ಭದಲ್ಲಿ ರಥದ ಮೇಲಿನ ಮಾರ್ಗದರ್ಶಕನ ಸನ್ನೆಗಳನ್ನು ಎಳೆಯುವ ಭಕ್ತಾದಿಗಳು ಅನುಸರಿಸುತ್ತಾ ಎಳೆಯುತ್ತಾರೆ. ರಥವನ್ನು ನಿಲ್ಲಿಸುವುದಕ್ಕೂ, ದಿಕ್ಕನ್ನು ಬದಲಾಯಿಸುವುದಕ್ಕೂ ಕೆಲವು ಸಾಧನಗಳನ್ನು ಬಳಸುತ್ತಾರೆ. ಅವುಗಳನ್ನು ಹೆದ್ದಾ ತಡೆಗೋಲ್ಲು ಎಂದು ಕರೆಯುತ್ತಾರೆ. ಈ ರಥೋತ್ಸವ ನಡೆಯುವ ಸಂದರ್ಬದಲ್ಲಿ ರಥದ ಕಳಶ ಇಳಿಸುವವರಿಗೂ ಯಾರೂ ಇಲ್ಲಿ ಮಾಂಸ ಭಕ್ಷಣೆಯನ್ನು ಮಾಡುವುದಿಲ್ಲ. ಕಳಸವನ್ನು ಇಳಿಸಿದ ನಂತರ ಮಾಂಸ ಉಪಯೋಗಿಸುವರು. ಎಲ್ಲಾ ವರ್ಗದ ಜನರ ಸರ್ವತೋಮುಖ, ಸೌಹಾರ್ದತೆಯ ಹಬ್ಬವಾಗಿದೆ. ಬಣ್ಣ-ಬಣ್ಣದ ಹೊಸ ಉಡುಪುಗಳನ್ನು ಆ ಊರಿನ ಜನರು ಧರಿಸಿಕೊಂಡು ಆನಂದ ಪಡುತ್ತಾರೆ.

## ಶಿಖರಕ್ಕೆ ಎಣ್ಣೆ ಎರೆಯುವುದು

ರಥೋತ್ಸವ ನಡೆದ ಮಾರನೆಯ ದಿನ ಶುದ್ಧ ಷಷ್ಠಿ. ಆ ದಿನ ಆ ಶಿಖರಕ್ಕೆ ಎಣ್ಣೆಯನ್ನು ಎರೆಯುವ ಪದ್ಧತಿ ಇದೆ. ಲಿಂಗಕ್ಕೆ ತೈಲವನೆರೆಯುವ ಬದಲು ಲಿಂಗದ ಮೇಲೆ ವಿರಾಜಿಸುವ ಶಿಖರಕ್ಕೆ ತೈಲವನ್ನು ಎರೆಯುವುದು ಬಹಳ ಮನೋಹರವೂ, ಆಶ್ಚರ್ಯವೂ ಆಗಿರುತ್ತದೆ. ವೈಜ್ಞಾನಿಕ ದೃಷ್ಟಿಯಿಂದ ವಿವೇಚಿಸಿದರೆ ಈ ಶಿಖರ ಬಳಪದ ಕಲ್ಲಿನಿಂದ ಚಿತ್ರ ವಿಚಿತ್ರವಾಗಿ ನಿರ್ಮಿಸಲ್ಪಟ್ಟಿದೆ. ಬಹುಶಃ ಗಾಳಿ, ಬಿಸಿಲುಗಳಿಗೆ ಬಳಪದ ಕಲ್ಲು ಛಿದ್ರವಾಗಬಾರದೆಂದೋ, ಬಿರುಕು ಬಿಡಬಾರದೆಂದೋ ಆಗಿನವರು ತೈಲವನ್ನು ಸವರುತ್ತಾ ಬಂದಿರಬೇಕೆಂದು ಕಾಣುತ್ತದೆ. ಏಕೆಂದರೆ ಸೂರ್ಯನ ಶಾಖವನ್ನು ಹೀರಿದ ತೈಲ ಸೂರ್ಯನ ಬಿಸಿಲ ಪ್ರಖರತೆಗೆ ತಾನೇ ಆವಿಯಾಗಿ ಕಲ್ಲನ್ನು ಶಾಖದಿಂದ ರಕ್ಷಿಸುವುದು. ನಮ್ಮವರ ಭಕ್ತಿ ಪರಾಕಾಷ್ಟತೆಯಿಂದಾಗಿ ಭಾರೀ ಪ್ರಮಾಣದಲ್ಲಿ ಬರುವ ತೈಲವನ್ನು ಲಿಂಗಕ್ಕೆ ಬದಲು ಶಿಖರಕ್ಕೆರೆದು ಭಕ್ತಿಯ ಪರಮೋತ್ಕೃಷ್ಟತೆಯನ್ನು ತೋರಿಸುತ್ತದೆ. ಇದರಿಂದ ಭಕ್ತರು ಅರ್ಪಿಸಿದ ತೈಲ ಯಾರೊಬ್ಬ ಅನ್ಯ ವ್ಯಕ್ತಿಗಳ ಸ್ವಾರ್ಥಕ್ಕೆ ಬಳಕೆಯಾಗದೇ ಪದಾರ್ಥಕ್ಕೆ ಬಳಸಲ್ಪಡುವುದು.

ಶ್ರೀ ಮರುಳಸಿದ್ದ ಶಿವಾಚಾರ್ಯರು ತಮ್ಮ ಶಿಷ್ಯ ಜರಿಮಲೆ ನಾಯಕನ ಶಾಪ ಪರಿಹಾರಾರ್ಥ ಧಡಿಯ 'ಎಣ್ಣೆ' ಶಿಖರಕ್ಕೆ ಅರ್ಪಿಸೆಂದು ಹೇಳಿದುದರ ಪರಿಣಾಮವಾಗಿ ಇಂದಿಗೂ ಈ ವಂಶಸ್ಥರಿಂದ ಬಂದ ಎಣ್ಣೆಯನ್ನು ಮೊದಲು ಅರ್ಪಿಸಿದ ತರುವಾಯವೇ ಬೇರೆಯವರ ತೈಲವನ್ನು ಎರೆಯಲಾಗಿವುದು.[೧]

**ಅಡಿ ಟಿಪ್ಪಣಿ**

೧. ಮಠದ ಅಧಿಕಾರಿಗಳಿಂದ ಮತ್ತು ಉಜ್ಜನಿ ಜನಪದರಿಂದ ತಿಳಿಯಲಾಗಿದೆ.

# ಅಧ್ಯಾಯ ೬

# ಉಜ್ಜಿನಿ ಗ್ರಾಮದ ಮೇಲೆ ಆಧುನಿಕತೆಯ ಪ್ರಭಾವ

ಗ್ರಾಮ ಸಮಾಜ ಯಾವಾಗಲೂ ಸ್ಥಿರವಾಗಿರುವುದಿಲ್ಲ. ಅವು ಚರದ ಸ್ಥಿತಿಯನ್ನು ಕಾಲಕಾಲಕ್ಕೆ ತಲುಪುತ್ತಲೇ ಇರುತ್ತವೆ. ಒಂದು ಕಾಲದಲ್ಲಿ ಉಂಟಾದ ಗ್ರಾಮದ ಪರಿಕಲ್ಪನೆಯು ಮತ್ತೊಂದು ಕಾಲಕ್ಕೆ ಬದಲಾಗಿರುತ್ತದೆ. ಅಂದರೆ ಭೌಗೋಳಿಕ ಅಥವಾ ಭೌತಿಕ ಸ್ಥಿತಿಯಿಂದಲೂ, ಸಾಮಾಜಿಕ, ಸಾಂಸ್ಕೃತಿಕ ಆಯಾಮಗಳಿಂದಲೂ ಕೂಡ ಗ್ರಾಮ ಸಮಾಜ ಅನೇಕ ಸ್ಥಿತ್ಯಂತರಗಳಿಗೆ ಒಳಗಾಗುತ್ತಲೇ ಇರುತ್ತದೆ. ಪರಂಪರೆಯನ್ನು ಹೊತ್ತು ನಿಂತ ಪ್ರಾಚೀನ ಗ್ರಾಮಗಳು ಇಂದು ವಿವಿಧ ಆಧುನಿಕ ಪ್ರೇರಣೆಯಿಂದ ಬದಲಾವಣೆಯ ಹಂತವನ್ನು ತಲುಪುತ್ತಿವೆ. ಇದು ಅನಿವಾರ್ಯ ಕೂಡ ಆಗಿದೆ. ನಗರೀಕರಣವನ್ನು ಅನುಕರಿಸುತ್ತಿರುವ ಇಂದಿನ ಹಳ್ಳಿಗಳು ಹಾಗೂ ಅಲ್ಲಿನ ಸಾಮಾಜಿಕ ಸ್ಥಿತಿಯು ಆಧುನಿಕ ಜೀವನ ವಿಧಾನವನ್ನು ಸ್ವೀಕರಿಸುವ ಮೂಲಕ ನವ್ಯತೆಯನ್ನು ಪಡೆಯುತ್ತಿದೆ. ಕೈಗಾರಿಕೆಗಳ ಪ್ರವೇಶದಿಂದಲೂ ಆರ್ಥಿಕ ಸಮಾಜ ಬದಲಾಗುತ್ತದೆ. ನಗರೀಕರಣ, ಕೈಗಾರೀಕರಣದ ಒತ್ತಡದಿಂದ ಕೇವಲ, ಗ್ರಾಮಗಳು ಬದಲಾವಣೆಯನ್ನಷ್ಟೇ ಅಲ್ಲ, ತೀವ್ರ ವಾಗಿ ಜರ್ಜರಿತವೂ ಆಗುತ್ತಿವೆ.

ಕೈಗಾರಿಕೆಯನ್ನು ಸ್ಥಾಪಿಸುವ ನೆಪದಲ್ಲಿ ಭೂಮಿ ಕಬಳಿಕೆ, ನಗರಗಳ ಅಗಲೀಕರಣ, ಇದರಿಂದ ಹಳ್ಳಿಗಳ ಭೌಗೋಳಿಕ ಪರಿಸರದ ಮಾಲಿನ್ಯ,ಆ ಮೂಲಕ ಜಲನಾಶ, ಜನನಾಶ, ಅನಾರೋಗ್ಯ ಮುಂತಾದ ತೊಂದರೆಗಳೂ ಘಟಿಸುತ್ತಿರುವುದು ಆಧುನೀಕರಣದಿಂದ ಆಗುತ್ತಿರುವ ಮತ್ತೊಂದು ಬಗೆಯ ಪರಿಣಾಮಗಳಾಗಿವೆ.

ಗಾಂಧೀಜಿಯು ಬಯಸಿದ ಭಾರತೀಯ ಸ್ವರಾಜ್ಯದ ಗ್ರಾಮಸಮಾಜದಲ್ಲಿ ಗುಡಿಕೈಗಾರಿಕೆಯಿಂದಲೇ ಅಭಿವೃದ್ದಿ ಸಾಧ್ಯವೆಂಬ ಮಾತು ನಿಜವಾಗಿಯೂ ಇಂದು ಅವಶ್ಯಕವೆನಿಸುತ್ತದೆ. ಗುಡಿ ಕೈಗಾರಿಕೆಗಳಿಂದ ಹಳ್ಳಿಗಳ ಗುಣಮಟ್ಟ ಅಭಿವೃದ್ಧಿಯ ಹಂತವನ್ನು ನಿಧಾನ ಗತಿಯಲ್ಲಾದರೂ ತಲುಪುತ್ತವೆ. ಆದರೆ ಗಾಂದೀಜಿಯವರ ಈ ಪರಿಕಲ್ಪನೆ ನಾಶವಾಗಿ ಆಧುನಿಕವಾಗಿ ಜಾಗತೀಕರಣದಂತಹ ಕರಾಳ ಆರ್ಥಿಕ ಸಾಮಾಜಿಕ ಸಂಘರ್ಷಗಳಿಗೆ ಒಳಗಾದ ಇಂದಿನ ಹಳ್ಳಿಗಳು ರಭಸವಾದ ಕೈಗಾರಿಕೆಯ, ಬಹುರಾಷ್ಟ್ರೀಯ ಕಂಪನಿಗಳ ಬೃಹತ್ ಬಂಡವಾಳ ಹೂಡಿಕೆಯ ಕ್ರಮದಿಂದ, ಆರ್ಥಿಕವಾಗಿ ದುರ್ಬಲವಾಗಿರುವ ಭಾರತದಂತಹ ಹಳ್ಳಿಗಳು ಅನೇಕ ಕುತ್ತುಗಳನ್ನು ಎದುರಿಸಬೇಕಾಗಿದೆ. ಅದರಂತೆ ಯಾವ ಕ್ಷೇತ್ರದಲ್ಲಿಯೂ ಪ್ರಬಲವಾಗಿ ಪೈಪೋಟಿಯನ್ನು ಎದುರಿಸಲಾರವು.

ಉಜ್ಜನಿಗ್ರಾಮವೂ ಕೂಡ ಆಧುನಿಕತೆಯ ಪ್ರಭಾವದಿಂದಾಗಿ ಅನೇಕ ಸಾಂಸ್ಕೃತಿಕ ಆಯಾಮಗಳಲ್ಲಿ ಬದಲಾವಣೆಯನ್ನು ಹೊಂದಿದೆ. ಉಜ್ಜಿನಿ ಗ್ರಾಮ ಸಮಾಜದ ಒಟ್ಟು ಆಧುನಿಕ ಸ್ಥಿತ್ಯಂತರವನ್ನು ಈ ಕೆಳಗಿನ ಅಂಶಗಳಲ್ಲಿ ವಿವರಿಸಬಹುದು.

೧. ಸಾಮಾಜಿಕ ಬದಲಾವಣೆ

೨. ಶೈಕ್ಷಣಿಕ ಬದಲಾವಣೆ

೩. ರಾಜಕೀಯ ಬದಲಾವಣೆ

೪. ಆರ್ಥಿಕ ಬದಲಾವಣೆ

೫. ಸಾಂಸ್ಕೃತಿಕ ಬದಲಾವಣೆ

೬. ಭೌತಿಕ ಬದಲಾವಣೆ

೭. ಭಾಷಿಕ ಬದಲಾವಣೆ

**೧. ಸಾಮಾಜಿಕ ಬದಲಾವಣೆ:** ಉಜ್ಜಿನಿ ಗ್ರಾಮವು ಅನೇಕ ಜಾತಿಜನಾಂಗಗಳಿಂದ ಕೂಡಿದ್ದಿತು. ಈ ಹಿಂದೆ ಸಂಪ್ರದಾಯ ಬದ್ಧ ಜೀವನ ವಿಧಾನವನ್ನು ನಡೆಸುತ್ತಿತ್ತು. ವರ್ಣ ವ್ಯವಸ್ಥೆಯು ಕಟ್ಟು ನಿಟ್ಟಿಗೆ ಪಾಲಿಸುತ್ತಿದ್ದು, ಮೇಲ್ವರ್ಗದವರಿಂದ ಕೆಳವರ್ಗಗಳ ಶೋಷಣೆಯು ಸಾಮಾನ್ಯವಾಗಿಯೇ ನಡೆದಿತ್ತು. ಆದರೆ ಇವತ್ತಿನ ಆಧುನಿಕ ಉಜ್ಜಿನಿಯ ಸಾಮಾಜಿಕ ಜೀವನ ವಿಧಾನವು ಈ ಬಗೆಯ ವರ್ಣವ್ಯವಸ್ಥೆಯಂತಹ ಅನಿಷ್ಟ ನಿಯಮದಿಂದ ದೂರ ಉಳಿದಿವೆ. ಜೊತೆಯಲ್ಲಿ ದೇವಾಲಯದಲ್ಲಿ ಕೆಳವರ್ಗದವರಿಗೆ ಪ್ರವೇಶವಿಲ್ಲದಿದ್ದರೂ, ಅನೇಕರು ಇಂದು ಪ್ರವೇಶ ಮಾಡಿದರೂ ಯಾವುದೇ ರೀತಿಯಲ್ಲಿ ಮೇಲ್ವರ್ಗದ ದಬ್ಬಾಳಿಕೆಯು ನಡೆಯುವುದಿಲ್ಲ, ಜಾತ್ಯಾತೀತ ಸಮಾಜದಲ್ಲಿ ಕಾನೂನಿನ ಅಡಿಯಲ್ಲಿ ಬಹುತೇಕ ಸರಳತೆಯ ಜೀವನವು ನಡೆಸುವಂತಾಗಿದೆ. ಜಡ್ಡು ಸಂಪ್ರದಾಯದಿಂದ ಏಕಮುಖವಾಗಿ ಚಲಿಸುತ್ತಿದ್ದ ಈ ಗ್ರಾಮವು ಅದರಿಂದ ವಿಘಟನೆ ಹೊಂದಿ ಸಂಪ್ರದಾಯ ನಿಷ್ಠತೆಯಿಂದ ದೂರ ಸರಿಯುವ ಹಂತಕ್ಕೆ ಬಂದಿದೆ. ಪ್ರಾಚೀನ ಸಾಮಾಜಿಕ ಜೀವನದಿಂದ, ಆಧುನಿಕತೆಯ ಪ್ರಭಾವ ಸ್ವೀಕರಿಸಿದ ಈ ಗ್ರಾಮ ಅನೇಕ ರೀತಿಯಲ್ಲಿ ಸುಧಾರಿಸಿದೆ. ನಗರೀಕರಣದ ಪ್ರಭಾವದಿಂದ, ನಗರದ ಜೀವನ ಶೈಲಿಯನ್ನು ಈ ಗ್ರಾಮ ಕ್ರಮೇಣ ಅನುಕರಿಸುತ್ತಲೇ ಬಂದಿದೆ. ಇದರಿಂದ ನಗರದ ಜೀವನ ಕ್ರಮ ಇಲ್ಲಿಯೂ ಕಂಡುಬರುತ್ತಿದೆ.

ಜನರು ವಾಸಿಸುವ ನೆಲೆಗಳು ಜೋಪಡಿ, ಗುಡಿಸಲುಗಳಿಂದ, ಮನೆಯ ಕಡೆಗೆ ಬದಲಾಗುತ್ತಿರುವುದು ಆಧುನಿಕ ಶೈಲಿಯ ಜೀವನ ಮಾದರಿಯನ್ನು ಹೇಳುತ್ತದೆ. ಈ ಗ್ರಾಮ ತೀರಾ ಹಿಂದುಳಿದ ಹಳ್ಳಿಯಲ್ಲದಿದ್ದರೂ ಗ್ರಾಮೀಣ ಪರಿಸರದ ಎಲ್ಲ ರೀತಿ-ನೀತಿಗಳನ್ನು ಪಡೆದುಕೊಂಡಿದೆ. ಇಂದು ಸಾಮಾಜಿಕ ಜೀವನ ಮೇಲ್ಮುಖ ಚಲನೆಯಿಂದ ಸುಧಾರಿಸುತ್ತಿದೆ.

೨. ಶೈಕ್ಷಣಿಕ ಬದಲಾವಣೆ: ಒಂದು ಕಾಲದಲ್ಲಿ ಶಿಕ್ಷಣ ಎಂಬುದು ಮೇಲ್ವರ್ಗದವರ ಸೊತ್ತಾಗಿತ್ತು. ಅದರಂತೆ ಈ ಗ್ರಾಮಕ್ಕೂ ಈ ಮಾತು ಅನ್ವಯವಾಗುತ್ತದೆ. ಇಂದು ಇಂಗ್ಲಿಷರ ಆಗಮನದಿಂದ ಸ್ವಾತಂತ್ರ್ಯ ನಂತರದಲ್ಲಿ ಶೈಕ್ಷಣಿಕ ವ್ಯವಸ್ಥೆಯು ಬದಲಾಗಿ ಎಲ್ಲರಿಗೂ ಅಕ್ಷರದ ಸ್ವಾತಂತ್ರ್ಯ ದೊರೆಯಿತು. ಶೈಕ್ಷಣಿಕವಾಗಿ ಹಿಂದುಳಿದಿದ್ದ ಈ ಗ್ರಾಮವು ಇಂದು ಆಧುನಿಕತೆಯ ಪ್ರಭಾವದಿಂದ ಅನಿವಾರ್ಯವಾಗಿಯಾದರೂ ಜನರು ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಪಾಠಶಾಲೆ - ಶಿಕ್ಷಕರು, ಅನೇಕ ಸೌಲಭ್ಯಗಳನ್ನು ಸರ್ಕಾರ ಒದಗಿಸಿದೆ. ಆ ಸೌಲಭ್ಯಗಳಿಂದ ಈ ಗ್ರಾಮದ ಶಿಕ್ಷಣ ಮಟ್ಟ ಹಿಂದಿಗಿಂತ ಬಹಳಷ್ಟು ಸುಧಾರಿಸಿದೆ. ಶಿಕ್ಷಣದಿಂದಾಗಿ ಗ್ರಾಮದ ಎಲ್ಲ ವರ್ಗಗಳು ವೈಚಾರಿಕ ನೆಲೆಯಲ್ಲಿ ನಿಂತು ಜೀವನವನ್ನು ಸಾಗಿಸುವಂತಾಗಿದೆ. ಶಿಕ್ಷಣದಿಂದಾಗಿ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ರಾಜಕೀಯ ವಲಯಗಳಲ್ಲಿಯೂ ವಿವಿಧ ರೀತಿಯಲ್ಲಿ ಪಾಲ್ಗೊಂಡು ಆಧುನಿಕತೆಯ ಎಲ್ಲ ಸವಾಲುಗಳಿಗೆ ಈ ಗ್ರಾಮ ಹರವಿಕೊಳ್ಳುತ್ತಿದೆ.

೩. ಆರ್ಥಿಕ ಬದಲಾವಣೆ: ಉಜ್ಜಿನಿ ಗ್ರಾಮವು ಆರ್ಥಿಕವಾಗಿ ಸಬಲವಾಗಿಯೇ ಇದೆಯೆನ್ನಬಹುದು. ಪ್ರಾಚೀನ ಕಾಲದಿಂದಲೂ ಈ ಹಳ್ಳಿಯು ಆರ್ಥಿಕ ಭದ್ರತೆಯನ್ನು ಹೊಂದಿದೆ. ಆದರೂ ಅನೇಕ ವೃತ್ತಿಪರ ಜಾತಿ, ವರ್ಗಗಳ ಆರ್ಥಿಕ ಮಟ್ಟ ಅಷ್ಟಾಗಿ ಅಭಿವೃದ್ಧಿ ಪಡೆದಿಲ್ಲ. ಮೇಲ್ವರ್ಗದವರು ಬಹುತೇಕ ಶಿಕ್ಷಣಹೊಂದಿ, ಸ್ಥಿತಿವಂತರಾಗಿದ್ದಾರೆ. ಕೆಳವರ್ಗಗಳಲ್ಲಿ ಇದುವರೆಗೂ ಅನಕ್ಷರಸ್ಥ ಆರ್ಥಿಕವಾಗಿ ದುರ್ಬಲವಾಗಿರುವ ಸಮುದಾಯಗಳಿವೆ. ಈ ಗ್ರಾಮದ ಮುಖ್ಯ ಆರ್ಥಿಕವಾಗಿ ದುರ್ಬಲವಾಗಿರುವ ಸಮುದಾಯಗಳಿವೆ. ಈ ಗ್ರಾಮದ ಮುಖ್ಯ ಆರ್ಥಿಕ ಆದಾಯ ಕೃಷಿಯಾಗಿದೆ. ಜೊತೆಗೆ ಕೊರಮ, ಬಡಗಿ, ಕಂಬಾರ ಮುಂತಾದ ವೃತ್ತಿಯನ್ನು ಅವಲಂಬಿಸಿ ಜೀವನ ನಡೆಸುವವರೂ ಇದ್ದಾರೆ. ಇಂದು ಕೈಗಾರಿಕೆಯಿಂದ ತಯಾರಾಗುವ ಪ್ಲಾಸ್ಟಿಕ್ ಲೋಹದ ವಸ್ತುಗಳು ಇವುಗಳಿಂದ ಈ ವೃತ್ತಿಪರ ಸಮುದಾಯವು ತಯಾರಿಸುವ ವಸ್ತುಗಳಿಗೆ ಬೇಡಿಕೆಯಿಲ್ಲದೇ, ಮಾರುಕಟ್ಟೆಯಲ್ಲಿ ಪೈಪೋಟಿಯನ್ನು ಎದುರಿಸದೇ ವೃತ್ತಿಪರ ಗುಡಿ ಕೈಗಾರಿಕೆಗಳು ನಾಶವಾಗುತ್ತಿವೆ. ಇದರಿಂದ ಗ್ರಾಮದಲ್ಲಿ ಅನೇಕ ಸಮುದಾಯಗಳ ಬದುಕು ತೀವ್ರ ಆತಂಕದ ಸ್ಥಿತಿಯಲ್ಲಿ ನಡೆಯುತ್ತಿದೆ.

ಯಂತ್ರಗಳನ್ನು ಉಪಯೋಗಿಸಿ ಗುಡಿ ಕೈಗಾರಿಕೆಗಳನ್ನು ವೃದ್ಧಿಸಲು ಇವರಿಗೆ ಸೌಲಭ್ಯಗಳ ಬಂಡವಾಳದ ಕೊರತೆಯಿದೆ. ಆಧುನಿಕತೆಯಿಂದ ಈ ಬಗೆಯ ಸವಾಲುಗಳನ್ನು ಎದುರಿಸಬೇಕಾಗಿದೆ. ಇಲ್ಲಿ ಜಾಗತೀಕರಣದ ಕರಾಳ ನೆರಳೂ ಕೂಡ ಇದೆಯೆಂಬುದನ್ನು ಮರೆಯುವಂತಿಲ್ಲ. ಜಾಗತೀಕರಣದ ವಿರಾಟ್ ಸ್ವರೂಪ ಅಷ್ಟಾಗಿ ಉಜ್ಜನಿಯಂತಹ ಗ್ರಾಮಗಳ ಮೇಲೆ ಪ್ರಭಾವ ಆಗಿಲ್ಲವಾದ್ದರಿಂದ, ನಗರದಷ್ಟು ಸವಾಲುಗಳನ್ನು ಹಳ್ಳಿಗಳು ಎದುರಿಸುತ್ತಿಲ್ಲ. ಆದರೂ ಮುಕ್ತ ಮಾರುಕಟ್ಟೆಯಿಂದ ಕೃಷಿ ಉತ್ಪನ್ನಗಳು ಹಾಗೂ ಗುಡಿ ಕೈಗಾರಿಕೋತ್ಪನ್ನಗಳು ನಗರದ ಮಾರುಕಟ್ಟೆಯಲ್ಲಿ ಮಾರಬೇಕಾಗಿದೆ. ಇದರಿಂದ ನೇರವಾಗಿ ಜಾಗತೀಕರಣದ ಬೆಲೆಯ ಪ್ರಭಾವ ಇವರ ಮೇಲೆ ತೀವ್ರ ದಾಳಿಯನ್ನು ಆರಂಭಿಸಿದೆ.

ಆಧುನಿಕತೆಯ ಪ್ರಭಾವದಿಂದ ಒಂದು ಕಡೆ ಸಾಮಾಜಿಕ ಜೀವನ ಬದಲಾಗುತ್ತಿದ್ದರೂ ಆರ್ಥಿಕತೆಯಿಂದ

ಅದೇ ಮಟ್ಟದಲ್ಲಿ ಕುಸಿಯುತ್ತಿದೆ. ಈ ಎರಡರ ನಡುವೆ ಸಮತೋಲನ ಕಾಪಾಡಿಕೊಳ್ಳುವಲ್ಲಿ ಉಜ್ಜಿನಿಯಂತಹ ಗ್ರಾಮಗಳು ತಡಕಾಡುತ್ತಿವೆ.

೪. ರಾಜಕೀಯ ಬದಲಾವಣೆ: ಉಜ್ಜಿನಿ ಗ್ರಾಮವು ರಾಜಕೀಯವಾಗಿಯೂ ಮುಂದುವರೆದಿದೆ. ಜಾತ್ಯಾತೀತ ಸಾಮಾಜಿಕ ವ್ಯವಸ್ಥೆಯಲ್ಲಿ, ಆಧುನೀಕತೆಯ ಪ್ರಭಾವದಿಂದ ರಾಜಕೀಯ ಅವಕಾಶಗಳನ್ನು ಇಲ್ಲಿನ ಜನತೆಯು ಬಳಸಿಕೊಂಡಿದ್ದಾರೆ. ಮೀಸಲಾತಿಯಂತಹ ಸೌಲಭ್ಯದಿಂದಾಗಿ ಎಲ್ಲಾ ಜಾತಿ, ವರ್ಗದವರೂ ರಾಜಕೀಯ ರಂಗಕ್ಕೆ ಪ್ರವೇಶಿಸಿದ್ದಾರೆ. ಇಬ್ಬರು ಶಾಸಕರಾದ ಕೀರ್ತಿಯೂ ಈ ಗ್ರಾಮಕ್ಕಿದ್ದು ಈ ಗ್ರಾಮದ ಸರ್ವೋನ್ನತಿಗಾಗಿ ಶ್ರಮಿಸಿದ್ದಾರೆ.

೫. ಸಾಂಸ್ಕೃತಿಕ ಬದಲಾವಣೆ: ಸಾಂಸ್ಕೃತಿಕ ಆಯಾಮಗಳಲ್ಲಿಯೂ ಆಧುನಿಕತೆ ಪ್ರವೇಶಿಸಿ ಉಜ್ಜಿನಿ ಗ್ರಾಮ ಅನೇಕ ಸ್ಥಿತ್ಯಂತರಗಳನ್ನು ಕಂಡುಕೊಂಡಿದೆ. ಆಚರಣೆಗಳಲ್ಲಿ ಹಬ್ಬ-ಹರಿದಿನಗಳಲ್ಲಿ ನಾನಾ ರೀತಿಯ ಬದಲಾವಣೆಗಳು ಇಲ್ಲಿ ಕಂಡು ಬರುತ್ತದೆ. ದೇವಾಲಯಗಳ ಜೀರ್ಣೋದ್ಧಾರ, ನಿರ್ಮಾಣವೂ ಕೂಡ ಆಧುನಿಕ ಶೈಲಿಯಲ್ಲಿ ಆಗುತ್ತಿದೆ. ಆಟಪಾಠಗಳಲ್ಲಿಯೂ ಉಜ್ಜಿನಿ ಗ್ರಾಮದ ಜನತೆಯು ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಇಲ್ಲಿರುವ ವೀರಶೈವ ಧರ್ಮದ ಮಠದ ಪರಂಪರೆಯು ಪಂಚಪೀಠಗಳಲ್ಲಿ ಒಂದಾಗಿದ್ದು ಪ್ರಸಿದ್ಧಿಯನ್ನು ಪಡೆದಿದೆ. ಒಂದು ಕಾಲದ ಪರಂಪರೆಯ ಪ್ರತಿನಿಧಿಯಾಗಿ, ಚರಿತ್ರೆ ಧರ್ಮವನ್ನು ಸಾರುವ ಈ ಮಠವು ಆಧುನಿಕತೆಯತ್ತ ಮೈಚಾಚಿರುವ ಇಂದಿನ ಸಮಾಜಕ್ಕೂ ಇವತ್ತಿನ ಅನಿವಾರ್ಯಗಳಿಗೆ ತಕ್ಕ ಹಾಗೆಯೇ ಧರ್ಮ-ವೈಚಾರಿಕತೆಯನ್ನು ತನ್ಮೂಲಕ ಸಾರುತ್ತಿದೆ. ಕಲೆಯು ಇಲ್ಲಿ ಪ್ರಸಿದ್ಧವಾಗಿದ್ದು, ಸಂಸ್ಕೃತಿಯನ್ನು ಎತ್ತಿ ಹೇಳುತ್ತಿದೆ. ಸರಕಾರದಿಂದ ಒದಗಿ ಬರುವ ಅನೇಕ ಸೌಲಭ್ಯಗಳನ್ನು ಸಾಂಸ್ಕೃತಿಕ ವಲಯಗಳಿಗೆ ಬಳಸಿಕೊಳ್ಳಲಾಗುತ್ತಿದೆ. ಗ್ರಾಮೀಣ ರಂಗಭೂಮಿ ಆಧುನಿಕ ನಾಟಕಗಳು, ಸಾಹಿತ್ಯಿಕ ಚಟುವಟಿಕೆಗಳು, ಸಂಗೀತ, ಸಿನಿಮಾ, ದೂರದರ್ಶನ, ಆಕಾಶವಾಣಿ ಹೀಗೆ ಎಲ್ಲ ರೀತಿಯ ಸೌಲಭ್ಯ ಈ ಗ್ರಾಮಕ್ಕೆ ಒದಗಿವೆ. ರಂಗಭೂಮಿಯ ಮೂಲಕ ಗ್ರಾಮೀಣ ಸ್ಥಳೀಯರು ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಮೌಖಿಕ ಸಂಪ್ರದಾಯವನ್ನೂ ಜೊತೆಗೆ ಗ್ರಾಮೀಣ ಪರಿಸರದ ಚರಿತ್ರೆ, ಸಂಸ್ಕೃತಿಯನ್ನು ತಮ್ಮಲ್ಲಿ ಅಡಗಿಸಿಕೊಂಡು ಆ ಮೂಲಕ ಹಾಡುವ ಸ್ತ್ರೀಯರು, ಕಲಾವಿದರೂ ಇದ್ದಾರೆ. ವೀರಶೈವ ಮಠದಲ್ಲಿ ಅನೇಕ ಚರಿತ್ರೆಯ ದಾಖಲೆಗಳಿವೆ.

ಈ ಎಲ್ಲ ಪರಂಪರೆಯ ಸಂಪತ್ತು ಇಂದು ಆಧುನಿಕವಾಗಿ ಬಂದಿರುವ ಅನೇಕ ಮನರಂಜನೆಯ ಸಾಧನಗಳಿಂದ ದೂರ ಸರಿಯುತ್ತಿವೆ. ಮೌಖಿಕ ಪರಂಪರೆಯು ಆಧುನಿಕತೆಯ ದಾಳಿಯಿಂದ ತತ್ತರಿಸಿ ಸಂಸ್ಕೃತಿಯಿಂದ ತನ್ನ ಕೊಂಡಿಯನ್ನೂ ಕಳಚಿಕೊಳ್ಳುತ್ತಿದೆ.

೬. ಭೌತಿಕ ಬದಲಾವಣೆ: ಯಾವುದೇ ಗ್ರಾಮ ಒಂದೇ ಸ್ವರೂಪದಲ್ಲಿ ಇರಲಾರದು. ಅದು ತನ್ನ ಭೌತಿಕ ಸ್ವರೂಪದಲ್ಲಿ ಕಾಲಕ್ಕನುಸಾರವಾಗಿ ಬದಲಾಗುತ್ತಾ ಹೋಗುತ್ತದೆ. ಉಜ್ಜಿನಿ ಗ್ರಾಮವೂ ಕೂಡ ಒಂದೆ ಸಣ್ಣ ಹಳ್ಳಿಯಾಗಿತ್ತು. ಇಂದು ಅದು ಬೆಳೆಯುತ್ತಾ, ಪಟ್ಟಣದ ಸ್ವರೂಪವನ್ನು ಪಡೆಯುತ್ತಿದೆ. ಭೌಗೋಳಿಕ ವಾತಾವರಣ ಅನುಕೂಲವಾಗಿದೆ. ಅರಣ್ಯ, ನೀರು, ಪ್ರಾಣಿ, ಪಕ್ಷಿ ಮುಂತಾದ ಸಂಪತ್ತು

ತಕ್ಕಷ್ಟು ಸಮೃದ್ಧಿಯಾಗಿಯೇ ಇವೆ. ಸಮುದಾಯಗಳ ವಾಸದ ನೆಲೆಗಳು ಗುಡಿಸಲುಗಳಿಂದ ಕಾಂಕ್ರೀಟ್ ಮನೆಗಳವರೆಗೆ ಬೆಳೆದದ್ದು ತಿಳಿಯುತ್ತದೆ. ವ್ಯವಸ್ಥಿತವಾದಂತಹ ರಸ್ತೆ, ಸಾರಿಗೆ, ಆರೋಗ್ಯ, ಶಿಕ್ಷಣ, ಧರ್ಮ ಮುಂತಾದ ಅವಶ್ಯಕತೆಗಳು ದೊರೆಯುತ್ತಿವೆ. ಪ್ರಾಕೃತಿಕವಾಗಿ ಅನುಕೂಲ ಸ್ಥಿತಿಯಲ್ಲಿರುವ ಉಜ್ಜಿನಿ ಗ್ರಾಮವು ಆಧುನಿಕತೆಯಿಂದ ಭೌತಿಕ ಸ್ವರೂಪದಲ್ಲಿ ತನ್ನ ಗಾತ್ರವನ್ನು ಹೆಚ್ಚು ಮಾಡಿಕೊಂಡಿದೆ.

**೮. ಭಾಷಿಕ ಬದಲಾವಣೆ:** ಆಧುನಿಕತೆಯ ಇವತ್ತಿನ ಸಂದರ್ಭದಲ್ಲಿ ಈ ಭಾಷಿಕ ಪ್ರಕ್ರಿಯೆ ಅತಿ ಮಹತ್ವದ ಅಂಶವೆನ್ನಬಹುದು. ಏಕೆಂದರೆ ಸ್ವಾತಂತ್ರ್ಯ ನಂತರದಲ್ಲಿ ಇಂಗ್ಲಿಷ್ ಭಾಷೆಯ ಪ್ರಭಾವ ಶೈಕ್ಷಣಿಕವಾಗಿ ರಾಜಕೀಯ ಸಾಮಾಜಿಕವಾಗಿ ಅತ್ಯಂತ ಪ್ರಬಲವಾಗಿ ಬೇರೂರಿತು. ಇದರಿಂದ ದೇಶೀಯ ಭಾಷೆಗಳಿಗೆ ಅನೇಕ ಕುತ್ತುಗಳು ಬರುತ್ತಿವೆ. ಅನ್ಯಭಾಷೆಯ ದಬ್ಬಾಳಿಕೆಯಿಂದ ಕನ್ನಡ ಭಾಷೆ ಸಂಸ್ಕೃತಿಗಳು ಕ್ರಮೇಣ ಮಾಯವಾಗಬಹುದೆಂಬ ಆತಂಕಗಳಲ್ಲಿ ಇಂದು ಭಾಷೆಯ ಮೋಹ ಬೆಳೆಯುತ್ತಿದೆ.

ಉಜ್ಜಿನಿ ಗ್ರಾಮದಲ್ಲಿಯೂ ಇಂಗ್ಲಿಷ್ ಭಾಷೆಯು ಶೈಕ್ಷಣಿಕವಾಗಿ ತನ್ನ ಪ್ರಭಾವವನ್ನೂ ಬೀರುತ್ತಿದೆ. ಆಡಳಿತದಲ್ಲಿಯೂ, ಅದರಂತೆ ಜಾನಪದರ ವ್ಯವಹಾರದಲ್ಲಿಯೂ ಆಂಗ್ಲಭಾಷೆಯ ಪ್ರಭಾವ ಆಗುತ್ತಿರುವುದು ಕಂಡು ಬರುತ್ತದೆ.

ಹೀಗೆ ಆಧುನಿಕತೆಗೆ ಮೈಯೊಡ್ಡಿರುವ ಇಂದಿನ ಗ್ರಾಮಗಳು ಒಂದು ಕಡೆ ಅಭಿವೃದ್ಧಿಯ ಸೋಗಿನಿಂದ ಮುನ್ನಡೆದಿದ್ದರೆ, ಮತ್ತೊಂದು ಕಡೆ ಜಾಗತೀಕರಣ, ಆಂಗ್ಲೀಕರಣ ಮುಂತಾದ ಕರಾಳ ನೆರಳಿನಿಂದ ವಿನಾಶದತ್ತ ಹೊರಳುತ್ತಿರುವುದೂ ತಿಳಿಯುತ್ತಿದೆ. ಕೈಗಾರಿಕೆ ಮುಂತಾದ ವಿದೇಶೀ ಕಂಪನಿಗಳಿಂದ ಗ್ರಾಮೀಣರ ಕೃಷಿ, ಗುಡಿಕೈಗಾರಿಕೆ, ಕಲೆ ಆರ್ಥಿಕ ಮೂಲಗಳು ನಾಶವಾಗುತ್ತಿವೆ. ಶ್ರಮಿಕರಿಗೆ ಕೆಲಸವಿಲ್ಲದಾಗ, ಯಂತ್ರಗಳ ಪ್ರವೇಶವಾಗಿದೆ. ಕಾರ್ಮಿಕರಿಗೆ ಯಂತ್ರದಿಂದ ಕೆಲಸವಿಲ್ಲದೇ, ಜೀವನ ಮಟ್ಟ ಕುಸಿಯುತ್ತಿದೆ. ಉಜ್ಜಿನಿಯಂತಹ ಗ್ರಾಮಗಳೂ ಇಂತಹ ಕ್ರಿಯೆಗೆ ಒಳಪಟ್ಟಿದ್ದು ಅನೇಕ ಏಳುಬೀಳನ್ನು ಕಾಣುತ್ತಿವೆ. ಒಟ್ಟಾರೆ ಆಧುನಿಕತೆಯಿಂದ ಗ್ರಾಮೀಣ ಪರಿಸರಕ್ಕೆ ಒಳಿತು, ಕೆಡುಕು ಎರಡೂ ಉಂಟು. ಸಮತೋಲನ ಕಾಪಾಡಿಕೊಂಡಲ್ಲಿ ಇದನ್ನು ಆರೋಗ್ಯಯುತವಾಗಿ ಸ್ವೀಕರಿಸಿ ಅಭಿವೃದ್ಧಿ ಹೊಂದಲು ಸಾಧ್ಯವಿದೆ.

# ಅಧ್ಯಾಯ ೭

# ಉಪಸಂಹಾರ

ಕೆಟ್ಟು ಪಟ್ಟಣ ಸೇರು ಎಂಬ ನಾಡು ನುಡಿಯಂತೆ ಪಾಶ್ಚಾತ್ಯ ಸಂಸ್ಕೃತಿ ಹಾಗೂ ಪ್ರಭಾವಿ ಸಮೂಹ ಸಂವಹನ ಮಾಧ್ಯಮಗಳಾದ ಚಲನಚಿತ್ರ ಮತ್ತು ದೂರದರ್ಶನಗಳ ಪ್ರಭಾವದಿಂದ ಇತರ ಹಳ್ಳಿಗಳಂತೆ ಉಜ್ಜಿನಿ ಕೂಡ ಮೊದಲಿನ ಭವ್ಯ ಪರಂಪರೆಯಿಂದ ದೂರ ಸರಿಯುತ್ತಲಿದೆ. ಶೈಕ್ಷಣಿಕ ಹಾಗೂ ಆರ್ಥಿಕತೆ ತುಂಬ ಪ್ರಗತಿ ಪಥದಲ್ಲಿದೆ, ಆದರೆ ಜನಪದ ಕಲೆ ಧರ್ಮ ಸಾಂಸ್ಕೃತಿಕ ಹಿಂಬಳಿಕೆ ಕಂಡು ಬರುತ್ತದೆ.

ಉಜ್ಜಿನಿ ಗ್ರಾಮಧ್ಯಯನ ಎಂಬ ಸಂಶೋದನಾತ್ಮಕ ಪ್ರಬಂಧದ ವ್ಯಾಪ್ತಿ ಏಳು ಅಧ್ಯಾಯಗಳನ್ನೊಳಗೊಂಡಿದೆ. ಅಧ್ಯಯನದ ಉದ್ದೇಶ ಸ್ವರೂಪ ಸಂಶೋದನೆಯ ವಿದಿವಿಧಾನಗಳು ಒಂದನೇ ಅಧ್ಯಯನದಲ್ಲಿ ಒಳಪಟ್ಟಿದೆ. ಅಧ್ಯಾಯ ಎರಡರಲ್ಲಿ "ಉಜ್ಜಿನಿ" ಗ್ರಾಮದ ಪದನಿಷ್ಪತ್ತಿ ಹಾಗೂ ಊರಿನ ಪಂಚಪೀಠ ಮಠದ ಪರಂಪರೆಯನ್ನು ಹೇಳಲಾಗಿದೆ, ಕನ್ನಡ ನಾಡಿನ ಮಠಗಳ (ವೀರಶೈವ) ಪರಂಪರೆಯ ದೃಷ್ಟಿಯಿಂದ ಉಜ್ಜಿನಿಗೆ ಮಹತ್ವದ ಸ್ಥಾನವಿದೆ. ಉಜ್ಜಿನಿ ಪೀಠಕ್ಕೆ ೧೦೦೦ ವರ್ಷಗಳ ಇತಿಹಾಸವಿದೆ. ಈ ಮಠದಿಂದಲೇ ಈ ಗ್ರಾಮವು ತನ್ನ ಅಸ್ತಿತ್ವವನ್ನು ಚರಿತ್ರೆಯಲ್ಲಿ ಗುರುತಿಸಿಕೊಂಡಿದೆಯನ್ನೆಬಹುದು. ಇಲ್ಲಿನ ದೇವಾಲಯಗಳು, ಮಠ ಹಾಗೂ ಮಂದಿರಗಳು ಕಲೆಯ ದೃಷ್ಟಿಯಿಂದ ಅತ್ಯಂತ ಆಕರ್ಷಣೆಯ ಹಾಗೂ ಶ್ರೇಷ್ಠ ಕೃತಿಗಳೆನ್ನಬಹುದು, ಹಾಗೆಯೇ ಇಲ್ಲಿಯೇ ದೊರೆಯುವ ಶಾಸನಗಳು ಜಾನಪದ ಸಾಹಿತ್ಯದ ಕಥೆ, ಲಾವಣಿ-ಒಗಟು-ಗಾದೆ ಮುಂತಾದ ಅಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಮೂರನೇ ಅಧ್ಯಾಯ ಉಜ್ಜಿನಿ ಗ್ರಾಮದ ಮೂಲಧಾರಗಳು ಎಂದಿದ್ದು ಇಲ್ಲಿ ಪುರಾಣ, ಐತಿಹ್ಯ, ಚರಿತ್ರೆ, ಕಲೆ ಮತ್ತು ವಾಸ್ತು ಶಿಲ್ಪವನ್ನು ಗಮನಿಸಿದೆ. ಮೌಖಿಕ ಪರಂಪರೆಯಲ್ಲಿ ಒಂದಲ್ಲಾ ಒಂದು ಕಾರಣಕ್ಕೆ ಜಾನಪದರಿಂದ ಪ್ರತಿಯೊಂದು ವಸ್ತು ಪ್ರಾಣಿಗಳ ದೇಸೆನೆ ಪುರಾಣ, ಐತಿಹ್ಯಗಳು ಮೂಲೆಗೆ ಕುಂತು ಜಡವಾಗಲಾರವು. ಬದಲಾಗಿ ಕೇಲವುಸಾರಿ ಚರಿತ್ರೆಯ ಮುಖ್ಯ ಸಂಗತಿಗಳಾಗಿ ಸಂಸ್ಕೃತಿಯ ವಾಹಿನಿಗಳಾಗಿ ಚಲನಶೀಲತೆಯನ್ನು ಪಡೆಯುತ್ತಿರುವ ಇಂತಹ ಪುರಾಣ ಐತಿಹ್ಯ ಕಲೆ ವಾಸ್ತುಶಿಲ್ಪವನ್ನು ಈ ಬಾಗದಲ್ಲಿ ಚರ್ಚಿಸಲಾಗಿದೆ.

ನಾಲ್ಕನೆ ಅಧ್ಯಾಯ ಉಜ್ಜಿನಿ ಜನಪದರ ಬದಕು, ಇಲ್ಲಿನ ಜನಪದರ ನಿತ್ಯದ ಬದಕು ಹಾಗೂ ಇಂದು ಬದಲಾಗುತ್ತಿರುವ ಪರಿಸರದಲ್ಲಿ ಆ ಬದುಕಿನ ಸ್ಥಿತ್ಯಂತರಗಳು, ಆರ್ಥಿಕ ಸ್ಥಿತಿ, ಜೀವನ ಒಂದು ಸವಾಲಾಗುತ್ತಿರುವ ಪ್ರಸ್ತುತ ದಿನಮಾನಗಳಲ್ಲಿ ಈ ಗ್ರಾಮದವರು ಕಂಡುಕೊಂಡ ಆರ್ಥಿಕ ಮೂಲಗಳು ಆರ್ಥಿಕತೆಯ ದುಸ್ಥಿತಿ, ಕೆಳಸಮುದಾಯಗಳು ಆರ್ಥಿಕ ಸಮಾಜಿಕ ವಲಯಗಳಲ್ಲಿ ಕಂಡುಕೊಂಡ ಅಸ್ತಿತ್ವ

ಎದುರು ಸುತ್ತಿರುವ ಸವಾಲುಗಳು ದೊರೆಯುವ ಸೌಲಭ್ಯಗಳು ಒಟ್ಟು ಈ ಗ್ರಾಮದ ಜನತೆಯು ಕೃಷಿ, ಕೈಗಾರಿಕೆ, ಹುಟ್ಟು ಸಾವು, ಧಾರ್ಮಿಕತೆ ಎಲ್ಲವುಗಳನ್ನು ಸಮಗ್ರವಾಗಿ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಐದನೇ ಅಧ್ಯಾಯದಲ್ಲಿ ಉಜ್ಜಿನಿ ಗ್ರಾಮದ ಆಚರಣೆಗಳನ್ನು ವಿವರಿಸಲಾಗಿದೆ. ಈ ಗ್ರಾಮದ ದಿನನಿತ್ಯದ ಆಚರಣೆಗಳು, ಹಬ್ಬಹರಿದಿನಗಳು ಆದಿನದಲ್ಲಿ ಗ್ರಾಮದ ಸಮುದಾಯಗಳು ಮಾಡುವ ರೂಡಿ, ಪದ್ಧತಿ, ಉತ್ಸವಗಳ ಬಗ್ಗೆ ಮಾಹಿತಿ ನೀಡಲಾಗಿದೆ. ಗ್ರಾಮದಿಂದ ಗ್ರಾಮಕ್ಕೆ ಆಚರಣೆಗಳಲ್ಲಿ ಬಿನ್ನವಾಗಿರುತ್ತವೆ. ಅಂತಹ ಬಿನ್ನ ಆಚರಣೆಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಆರನೇ ಅಧ್ಯಾಯವು ಉಜ್ಜಿನಿ ಗ್ರಾಮದ ಮೇಲೆ ಆಧುನಿಕತೆಯ ಪ್ರಭಾವ, ಗ್ರಾಮದ ಅಧ್ಯಯನದ ಮೂಲಕ ಕಂಡುಕೊಂಡ ವಿಶೇಷ ಅಂಶಗಳನ್ನು ಒಟ್ಟು ಚರಿತ್ರೆಯ ನಿರ್ವಚನದ ಸಂದರ್ಭದಲ್ಲಿ ಕೂಡಬಹುದಾದ ಎಳೆಗಳು, ಆಮೂಲಕ ಮೂಲಾಧಾರಗಳಾಗಿ ನಿಲ್ಲುವ ಉಪಕ್ರಮದ ಮಾದರಿಗಳಾಗಿ ಹಳ್ಳಿಗಳು ನಿಂತಿವೆಯೆಂದು ಗ್ರಹಿಸಬೇಕಾಗುತ್ತದೆ. ಗ್ರಾಮದಲ್ಲಿ ಬದಕುವ ಒಟ್ಟಾರೆ ಎಲ್ಲಾ ಸಮುದಾಯಗಳು, ಅವರವರ ಸಮಾಜಿಕ ಜೀವನ ವಿಧಾನ, ಜಾತಿಯ ನೆಲೆಯಲ್ಲಿ ಅವರು ಕಂಡುಕೊಂಡ ಅಸ್ತಿತ್ವ. ಇದರೊಟ್ಟಿಗೆ ಗ್ರಾಮದ ಅನನ್ಯತೆಯ ಸಾಧನೆ, ಆಧುನಿಕತೆಯಿಂದ ಗ್ರಾಮದ ಮೇಲೆ ಆಗಿರುವ ಸಾಮಾಜಿಕ ಬದಲಾವಣೆ, ರಾಜಕೀಯ ಬದಲಾವಣೆ, ಶೈಕ್ಷಣಿಕ ಬದಲಾವಣೆ, ಸಾಂಸ್ಕೃತಿಕ ಬದಲಾವಣೆ, ಬೌತಿಕ ಬದಲಾವಣೆ, ಭಾಷಿಕ ಬದಲಾವಣೆ ಮತ್ತು ಅದರಲ್ಲಿಯೂ ಕರ್ನಾಟಕದಂತಹ ಗ್ರಾಮೀಣ ಪರಿಸರಕ್ಕೆ ಇದಿರಿಂದಾಗುವ ಒಳಿತು-ಕೆಡಕುಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಕೊನೆಯ ಅನುಬಂಧದಲ್ಲಿ ಉಜ್ಜಿನಿ ಗ್ರಾಮದ ದೇವಾಲಯಗಳ ಮತ್ತು ಮುಂತಾದ ಛಾಯ ಚಿತ್ರಗಳು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಂಗ್ರಹಿಸಿಕೊಂಡು ಬಂದ ಬಿಡಿ ಹಾಡುಗಳನ್ನು, ಗ್ರಂಥಸೂಚಿಯನ್ನು ನೀಡಲಾಗಿದೆ.

# ಅನುಬಂಧ

## ಚಾಡಮ್ಮನ ಹಾಡು

೧. ಅಯ್ಯನವರ ಮನೆಗೆ ಹೋಗ್ಯಾಳ ಚಾವಡಮ್ಮ
ಗೌಡರಣ್ಣನ ಕರೆಸ್ಯಾಳ
ನೀ ಬಲ್ಲಿದಳೆ. ||೨||

೨. ಗೌಡರ ಅಣ್ಣಾನ ಕರಿಸಿ ಕೇಳತಾಳೆ
ಸರುಗಾಕೆ ಜ್ವಾಳ ಬರಬೇಕಣ್ಣ
ನೀ ಬಲ್ಲಿದಳೆ. ||೨||

೩. ಅಗೆವು ಎತೆಗೆದಿಲ್ಲಾ ಕಣವ ಎ ಮಾಡಿಲ್ಲಾ
ಇನ್ನೊಂದು ವರ್ಷ ತನುದಯ್ಯವ್ವ
ನೀ ಬಲ್ಲಿದಳೆ. ||೨||

೪. ಇನ್ನೊಂದು ವರ್ಷ ತನುವೈಭವದ
ಸರಗದ ಜ್ವಾಳ ಬರುತಾತತ್ವ
ನೀ ಬಲ್ಲಿದಳೆ. ||೨||

೫. ಬಣಕಾರನ ಎ ಮನೆಗೆ ಹೋದಾಳು ಚಾವಡಮ್ಮ
ಬಣಕಾರಣ್ಣನ ಕರೆಸ್ಯಾಳವ್ವ
ನೀ ಬಲ್ಲಿದಳೆ....... ||೨||

೬. ಬಣಕಾರನ ಕರಿಸಿ ಕೇಳುತಾಳೆ
ಜೋಡಿ ಎರಡು ರಾಶಿ ಬರಬೇಕಣ್ಣಾ
ನೀ ಬಲ್ಲಿದಳೆ. ||೨||

೭. ಕಳಸವಾ ತಿಕ್ಕಲು ಕಳಸಾವ ಬೆಳಗಿಲ್ಲೂ
ಇನ್ನೊಂದು ವರುಷವಾ ತನುವಯ್ಯವ್ವ
ನೀ ಬಲ್ಲಿದಳೆ. ||೨||

೮. ಇನ್ನೊಂದು ವರುಷದ ತನುವೈಭವದ
ಜೋಡಿ ಎರಡು ರಾಶಿ ಬರುತಾವವ್ವಾ
ನೀ ಬಲ್ಲಿದಳೆ. ||೨||

೯. ಕುಂಬಾರಣ್ಣನ ಮನೆಗೆ ಹೋದಾಳೆ ಚೌವಡಮ್ಮ
ಕುಂಬಾರಣ್ಣನ ಕರಿಸಿ ಕೇಳುತಾಳೆ
ಕೇದಗಿ ಮಗಿಯು ಬರಬೇಕಣ್ಣ ನೀ ಬಲ್ಲಿದಳೆ. ||೨||

೧೦. ಮಣ್ಣನ್ನು ತಂದಿಲ್ಲಾ ಮಣ್ಣನ್ನು ನೆನದಿಲ್ಲಾ
ಇನ್ನೊಂದು ವರುಷ ತುನವಯ್ಯವ್ವ
ನೀ ಬಲ್ಲಿದಳೆ. ||೨||

೧೧. ಇನ್ನೊಂದು ವರುಷದ ತನು ವೈಭವದ
ಕೇದಗಿ ಮಗಿಯು ಬರುತಾವವ್ವ
ನೀ ಬಲ್ಲಿದಳೆ. ||೨||

೧೨. ಕರುಬರ ಗೇರಿಗೆ ಹೋದಾಳು ಚೌವಡಮ್ಮ
ಕುರುಬರ ಅಣ್ಣಾನ ಕರಿಸ್ಯಾಳೆ
ನೀ ಬಲ್ಲಿದಳೆ. ||೨||

೧೩. ಕುರುಬರ ಅಣ್ಣಾನ ಕರಿಸಿ ಕೇಳುತಾಳೆ
ಸರುಗಾಕ ಮರಿಯು ಬರಬೇಕಣ್ಣಾ
ನೀ ಬಲ್ಲಿದಳೆ. ||೨||

೧೪. ಕುರಿಗಳು ಬಂದಿಲ್ಲೂ ಕುರಿಗಳೇ ಇದಿಲ್ಲಾ
ಕುರಿಗಳಿಗೆ ಇನ್ನೊಂದು ವರುಷ ತನುವಯ್ಯವ್ವ
ನೀ ಬಲ್ಲಿದಳೆ. ||೨||

೧೫. ಇನ್ನೊಂದು ವರುಷಕೆ ತನುವೈಭವದ
ಸರುಗಕೆ ಮರಿಯು ಬರುತಾವವ್ವ
ನೀ ಬಲ್ಲಿದಳೆ. ||೨||

೧೬. ಮ್ಯಾದರಾ ಗೇರಿಗೆ ಹೋಗ್ಯಾಳ ಚೌವಡಮ್ಮ
ಮ್ಯಾದರಾ ಅಣ್ಣನಾ ಕರಿಸ್ಯಾಳೆ
ನೀ ಬಲ್ಲಿದಳೆ. ||೨||

೧೭. ಮ್ಯಾದರ ಅಣ್ಣಾನ ಕರಿಸಿ ಕೇಳುತಾಳೆ
ಸರುಗಾಕೆ ಪುಟ್ಟಿ ಒರುಬೇಕಣ್ಣಾ
ನೀ ಬಲ್ಲಿದಳೆ. ||೨||

೧೮. ಬರಲವ ಎ ತಂದಿಲ್ಲಾ ಬರಲವ ನಾ ಎಣೆಸಿದಿಲ್ಲಾ
ಇನ್ನೊಂದು ವರುಷ ತನುವಯ್ಯವ್ವ
ನೀ ಬಲ್ಲಿದಳೆ. ||೨||

೧೯. ಇನ್ನೊಂದು ವರುಷಕೆ ತನುವೈಭವದ
ಸಡಗರದ ಸರುಗಕೆ ಪುಟ್ಟಿ ಬರುತಾವವ್ವ
ನೀ ಬಲ್ಲಿದಳೆ. ||೨||

೨೦. ಮಾದರ ಗೇರಿಗೆ ಹೋದಾಳ ಚಾವಡಮ್ಮ
ಮಾದರಣ್ಣನ ಕರೆಸಾಳವ್ವ
ನೀ ಬಲ್ಲಿದಳೆ. ||೨||

೨೧. ಮಾದರ ಅಣ್ಣನ ಕರಸಿ ಕೇಳುತಾಳೆ
ಕ್ಯಾಣಗೆ ಮಣಿಯೂ ಬರಬೇಕಣ್ಣಾ
ನೀ ಬಲ್ಲಿದಳೆ. ||೨||
೨೨. ಚರ್ಮಾವ ತಂದಿಲ್ಲಾ ಚರ್ಮಾವ ನೆನಸಿಲ್ಲಾ
ಇನ್ನೊಂದು ವರ್ಷ ತನುವಯ್ಯವ್ವ
ನೀ ಬಲ್ಲಿದಳೆ. ||೨||
೨೩. ಇನ್ನೊಂದು ವರುಷಕೆ ತನುವೈಭವದ ಕ್ಯಾಣಗೆ
ಮಿಣಿಯು ಬರುತೈತವ್ವ
ನೀ ಬಲ್ಲಿದಳೆ. ||೨||
೨೪. ಇಪ್ಪತು ವರ್ಷದ ತುಪ್ಪುಂಡ ಕ್ಯಾಣವ
ಜಾತಿ ಮಿಣಿಯಾಕಿ ಹಿಡಿಸ್ಯಾಳವ್ವ
ನೀ ಬಲಿದಳೆ. ||೨||
೨೫. ಜತ್ತಿನ ಮಿಣಿಯಾಕಿ ಹಿಡಿಸ್ಯಾಳ ಚಾವಡಮ್ಮ
ನೆತ್ತಿಯ ನೆಣವ ತೆಗೆಸ್ಯಾಳವ್ವ
ನೀ ಬಲ್ಲಿದಳೆ. ||೨||
೨೬. ನೆತ್ತಿಯ ನೇಣವ ತೆಗೆಸಿ ಕಕ್ಕಡವ ಮಾಡಿ
ಜಗಲಿಯಲ್ಲಿ ಉರಿಯೇ ಜಗಜೋತವ್ವ
ನೀ ಬಲ್ಲಿದಳೆ. ||೨||
೨೭. ಆರು ವರುಷ ಹಾಲುಂಡ ಕ್ಯಾಣವಾ
ಸಣ್ಣ ಮಿಣಿಯಾಕಿ ಹಿಡಿಸಾಳವ್ವ
ನೀ ಬಲ್ಲಿದಳೆ. ||೨||
೨೮. ಸಣ್ಣನೆ ಮಿಣಿಯ್ಯಾಕಿ ಹಿಡಿಸ್ಯಾಳೆ ಚಾವಡಮ್ಮ
ಕಣಿನ ನೇಣವ ತೆಗೆಸ್ಯಾಳವ್ವ
ನೀ ಬಲ್ಲಿದಳೆ. ||೨||
೨೯. ಕಣ್ಣಿನ ನೇಣಾವ ತೆಗಿಸಿ ಕಕ್ಕಡ ಮಾಡಿ
ತಣ್ಣಗೆ ಉರಿಯೇ ಜಗಜೋತವ್ವ
ನೀ ಬಲ್ಲಿದಳೆ. ||೨||

- ಹಾಡಿದವರು : ದುರುಗಮ್ಮ ಮತ್ತು ಸಂಗಡಿಗರು

## ವನೆತಮ್ಮನ ಹಾಡು

೧. ಸಾಂಬ ಮೂರುತಿಗೆ ಯಾವುದು ಜಳಕ
ಈಸಾ ಮೂರುತಿಗೆ ಯಾವುದು ಜಳಕ
ತಾಯಿ ವನ್ನಮ್ಮಗೆ ಯಾವುದ ಜಳಕ. ಉದೋ.....ಉದೋ.....||

೨. ಆನಂದ ಮೂರುತಿಗೆ ಬಾವಿನೀರಿನ ಜಳಕ
ಈಸಾ ಮೂರುತಿಗೆ ಹಳ್ಳದ ನೀರಿನ ಜಳಕ
ತಾಯಿ ವನ್ನಮ್ಮಗೆ ಹೊಳೆ ನೀರಿನ ಜಳಕ. ಉದೋ.....ಉದೋ.....||

೩. ಆನಂದ ಮೂರುತಿಗೆ ಯಾವುದುದು ಉಡಿಗೆ
ಈಸಾ ಮೂರುತಿಗೆ ಯಾವುದು ಉಡಿಗೆ
ತಾಯಿ ವನ್ನಮ್ಮಗೆ ಯಾವುದು ಉಡಿಗೆ. ಉದೋ.....ಉದೋ.....||

೪. ಆನಂದ ಮೂರುತಿಗೆ ಕಂಚ್ಚಿನ ಸೀರೆ
ಈಸಾ ಮೂರುತಿಗೆ ಹೂವಿನಾ ಸೀರೆ
ತಾಯಿ ವನ್ನಮ್ಮಗೆ ಪಿತಾಂಬರದ ಸೀರೆ. ಉದೋ.....ಉದೋ.....||

೫. ಆನಂದ ಮೂರುತಿಗೆ ಯಾವುದು ದೀಪ
ಈಸಾ ಮೂರುತಿಗೆ ಯಾವುದು ದೀಪ
ತಾಯಿ ವನ್ನಮ್ಮಗೆ ತುಪ್ಪದ ದೀಪ. ಉದೋ.....ಉದೋ...||

೬. ಆನಂದ ಮೂರುತಿಗೆ ಔಡ್ಲ ಎಣ್ಣೆ ದೀಪ
ಈಸಾ ಮೂರುತಿಗೆ ಅಳ್ಳೆ ಎಣ್ಣೆ ದೀಪ
ತಾಯಿ ವನ್ನಮ್ಮಗೆ ತುಪ್ಪದ ದೀಪ. ಉದೋ..... ಉದೋ....||

೭. ಆನಂದ ಮೂರುತಿಗೆ ಯಾವುದು ಹೂವು
ಈಸಾ ಮೂರುತಿಗೆ ಯಾವುದು ಹೂವು
ತಾಯಿ ವನ್ನಮ್ಮಗೆ ಯಾವುದು ಹೂವು. ಉದೋ.....ಉದೋ.....||

೮. ಆನಂದ ಮೂರುತಿಗೆ ಕನಕಾಂಬರಿ ಹೂವು
ಈಸಾ ಮೂರುತಿಗೆ ಕನಗಲ ಹೂವು
ತಾಯಿ ವನ್ನಮ್ಮಗೆ ಮಲ್ಲಿಗೆ ಹೂವು ಉದೋ.....ಉದೋ....

೯. ಆನಂದ ಮೂರುತಿಗೆ ಯಾವುದು ಎಡೆಯು
ಈಸಾ ಮೂರುತಿಗೆ ಯಾವುದು ಎಡೆಯು
ತಾಯಿ ವನ್ನಮ್ಮಗೆ ಯಾವುದು ಎಡೆಯು. ಉದೋ.....ಉದೋ.....

೧೦. ಆನಂದ ಮೂರುತಿಗೆ ಹುಗಿಯ ಎಡೆಯು
ಈಸಾ ಮೂರುತಿಗೆ ಗವಲಿಯ ಎಡೆಯು
ತಾಯಿ ವನ್ನಮ್ಮಗೆ ಹೋಳಗೆ ಎಡೆಯು. ಉದೋ.....ಉದೋ.....

೧೧. ಆನಂದ ಮೂರುತಿಗೆ ಯಾವುದು ಕಾಯಿ
ಈಸಾ ಮೂರುತಿಗೆ ಯಾವುದು ಕಾಯಿ
ತಾಯಿ ವನ್ನಮ್ಮಗೆ ಯಾವುದು ಕಾಯಿ. ಉದೋ.....ಉದೋ.....

೧೨. ಆನಂದ ಮೂರುತಿಗೆ ಬಾಳೆಕಾಯಿ
ಈಸಾ ಮೂರುತಿಗೆ ನಿಂಭೆಯಕಾಯಿ
ತಾಯಿ ವನ್ನಮ್ಮಗೆ ತೆಂಗಿನಕಾಯಿ. ಉದೋ.....ಉದೋ.....

೧೩. ಆನಂದ ಮೂರುತಿಗೆ ಯಾವುದು ಬಾಕು
ಈಸಾ ಮೂರುತಿಗೆ ಯಾವುದು ಬಾಕು
ತಾಯಿ ವನ್ನಮ್ಮಗೆ ಯಾವುದು ಬಾಕು. ಉದೋ.....ಉದೋ.....

೧೪. ಆನಂದ ಮೂರುತಿಗೆ ಉಕ್ಕಿನ ಬಾಕು
ಈಸಾ ಮೂರುತಿಗೆ ಬೆಳ್ಳಿಯ ಬಾಕು
ತಾಯಿ ವನ್ನಮ್ಮಗೆ ಬಂಗಾರದ ಬಾಕು. ಉದೋ.....ಉದೋ.....

೧೫. ಆನಂದ ಮೂರುತಿಗೆ ಬಟ್ಟು
ಈಸಾ ಮೂರುತಿಗೆ ಯಾವುದು ಬಟ್ಟು
ತಾಯಿ ವನ್ನಮ್ಮಗೆ ಯಾವುದು ಬಟ್ಟು. ಉದೋ.....ಉದೋ....

೧೬. ಆನಂದ ಮೂರುತಿಗೆ ಹಚ್ಚೆ ಬಟ್ಟುಃ
ಈಸಾ ಮೂರುತಿಗೆ ಕುಂಕುಮದ ಬಟ್ಟು
ತಾಯಿ ವನ್ನಮ್ಮಗೆ ಚಂದ್ರನ ಬಟ್ಟು. ಉದೋ.....ಉದೋ.....

೧೭. ಆನಂದ ಮೂರುತಿಗೆ ಯಾವುದು ವಾರ
ಈಸಾ ಮೂರುತಿಗೆ ಯಾವುದು ವಾರ
ತಾಯಿ ವನ್ನಮ್ಮಗೆ ಯಾವುದು ವಾರ. ಉದೋ.....ಉದೋ.....

೧೮. ಆನಂದ ಮೂರುತಿಗೆ ಭಾನುವಾರ
ಈಸಾ ಮೂರುತಿಗೆ ಸ್ವಾಮುವಾರ
ತಾಯಿ ವನ್ನಮ್ಮಗೆ ಮಂಗಳವಾರ. ಉದೋ.....ಉದೋ.....

- ಹಾಡಿದವರು : ನಾಗರಕಟ್ಟೆ ಮಾರಮ್ಮ ಮತ್ತು ಸಂಗಡಿಗರು

## ಮರುಳುಸಿದ್ದನ ಹಾಡು

೧. ಪರುಶೆ ಬರಲವ್ವ ಪರಮೇಶ್ವರಗೆ
ದೊರೆಯಾಳು ಉಜ್ಜನಿ ಮರುಳುಸಿದ್ದಯ್ಯಗೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ||೨||

೨. ನಿತ್ಯ ಗೌರಮ್ಮನ ನಿಲಿಸ್ಯಾನು ಕನ್ನೆಲೆ
ಬಾಸಿಂಗ ಕಟ್ಟಿ ಹೋಗದಾರ ಮರುಳಣ್ಣನ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ||೨||

೩. ಬಾಸಿಂಗ ಕಟ್ಟಿ ಹೋಗದರಿಬ್ಬರನು
ದಂಡಿಸಿ ಹೊಯ್ದು ಯುಮಗಂಟ್ಟ ನನ್ನಯ್ಯಗೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ||೨||

೪. ಪರುಶೆ ಬರಲವ್ವ ನನ್ನಯ್ಯಗೆ
ಉಜ್ಜಿನಿ ಮರುಳು ಸಿದ್ದಯ್ಯಗೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ||೨||

೫. ಹಳ್ಳವಾ ಇಳಿವಾಗ ಸೆಲ್ಲುವುದು ಗೆಜ್ಜೆ
ನಲ್ಲಾನಾ ನುಡಿಗೆ ನಡೆಗೆವು ನನ್ನಯ್ಯಗೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ||೨||

೬. ಕಟ್ಟೆಯ ಇಳಿಯುವಾಗ ತಿಚ್ಚನಾ ಗೆಜ್ಜೆ
ನಿಚ್ಚಂತ ಗುಡಿಗೆ ಬಡಿಯುವ ನನ್ನಯ್ಯಗೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರದಿರಲಿ ||೨||

೭. ಅಪ್ಪಾ ನನ್ನ ಕಾಲು ತುಪ್ಪಕಿಂತ ಮಿದುವು
ಮತ್ತಲ ಮುಳ್ಳು ತುಳೆದೋ ನನ್ನಯ್ಯನೆ
ಪರುಶೆ ಬರುತಿರಲಿ ಜಾತ್ರೆ ನೆರತಿರಲಿ ||೨||

೮. ಹನ್ನೊಂದು ದಿನದಾಗ ಬಂದವರು ಹೋಗುವಾಗ
ತೆರಬಯಲಿಗೆ ನೆಲೆನಿಂತ ನನ್ನಯ್ಯಗೆ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ||೨||

೯. ತೇರಿನ ಬಯಲಿಗೆ ನೆಲೆನಿಂತ
ಮರುಳಣ್ಣಗೆ ಹೊಂಬಾಳೆ ಬೆಳಗ್ಯಾವಾ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನೆರತಿರಲಿ ||೨||

೧೦. ತೇರಿನಾ ಬಯಲಿಗೆ ನೆಲೆನಿಂತ
ನನ್ನಯ್ಯಗೆ ಬಾಳೆಹಣ್ಣು ಬೆಳಗ್ಯಾರೋ
ಪರುಶೆ ಬರುತಿರಲಿ ನನ್ನಯ್ಯಗೆ ಜಾತ್ರೆ ನರತಿರಲಿ ||೨||

- ಹಾಡಿದವರು : ಹೊಸಕೇರಿ ಬಸಮ್ಮ ಮತ್ತು ಸಂಗಡಿಗರು

## ವಕ್ತೃ ವಿವರ

| ಅ.ಕ್ರ.ಸಂ. | ಸ್ಥಳ | ಹೆಸರು | ಜಾತಿ | ವೃತ್ತಿ | ವಯಸ್ಸು |
|---|---|---|---|---|---|
| ೧. | ಉಜ್ಜಿನಿ | ದೊಮ್ಮಟ್ಟ ಕೆಂಚ್ಚಮ್ಮ | ಪ.ಜಾ. | ಕೂಲಿ | ೮೨ |
| ೨. | ಉಜ್ಜಿನಿ | ಹೊಸಕೇರಿ ರುದ್ರಮ್ಮ | ಪ.ಜಾ. | ಕೂಲಿ | ೭೫ |
| ೩. | ಉಜ್ಜಿನಿ | ಈರಮ್ಮ | ಪ.ಜಾ. | ಕೂಲಿ | ೭೦ |
| ೪. | ಉಜ್ಜಿನಿ | ನಾಗರಕಟ್ಟಿ ಮಾರಮ್ಮ | ಪ.ಜಾ. | ಕೂಲಿ | ೬೦ |
| ೫. | ಉಜ್ಜಿನಿ | ಹೊಸಕೇರಿ ಬಸಮ್ಮ | ಪ.ಜಾ. | ಕೂಲಿ | ೫೫ |
| ೬. | ಉಜ್ಜಿನಿ | ಹಾಲಮ್ಮ | ಪ.ಜಾ. | ಕೂಲಿ | ೩೮ |
| ೭. | ಉಜ್ಜಿನಿ | ರಾಮಚಂದ್ರಪ್ಪ | ಪ.ಜಾ. | ಬೆಲ್ದಾರಕೆಲಸ | ೫೦ |
| ೮. | ಉಜ್ಜಿನಿ | ಕೆ. ನಾಗಪ್ಪ | ಪ.ಜಾ. | ವ್ಯವಸಾಯ | ೪೯ |
| ೯. | ಉಜ್ಜಿನಿ | ಅಬ್ದುಲ್ ಕಲಾಂ | ಮುಸ್ಲಿಂ | ಗ್ರಾ.ಪ.ಬಿಲ್. ಕಲೆಕ್ಟರ್ | ೩೮ |
| ೧೦. | ಉಜ್ಜಿನಿ | ಬಾಣದರ ನರಗಪ್ಪ | ಕುರುಬರು | ವ್ಯವಸಾಯ | ೭೦ |
| ೧೧. | ಉಜ್ಜಿನಿ | ಕೆ.ಎಂ.ಸಿದ್ಧಲಿಂಗಯ್ಯ | ವೀರಶೈವ | ವ್ಯವಸಾಯ | ೬೦ |
| ೧೨. | ಉಜ್ಜಿನಿ | ತಳವಾರ ಸಿದ್ದಲಿಂಗಪ್ಪ | ನಾಯಕ | ಒಕ್ಕಲುತನ | ೬೦ |
| ೧೩. | ಉಜ್ಜಿನಿ | ಕೈಮುರ್ದ ಸಿದ್ದಲಿಂಗಪ್ಪ | ನಾಯಕ | ವ್ಯವಸಾಯ | ೪೦ |
| ೧೪. | ಉಜ್ಜಿನಿ | ಜೆ.ರಮತ್ ಅಲಿಸಾಬ್ | ಮುಸ್ಲಿಂ | ವ್ಯವಸಾಯ | ೪೦ |
| ೧೫. | ಉಜ್ಜಿನಿ | ಪೇತೇಗಾರ ರುಜ್ಞಾನ್ | ಮುಸ್ಲಿಂ | ವ್ಯವಸಾಯ | ೪೫ |
| ೧೬. | ಉಜ್ಜಿನಿ | ಹುಲುಗಪ್ಪ | ಪ.ಜಾ. | ಕೂಲಿ | ೪೦ |
| ೧೭. | ಉಜ್ಜಿನಿ | ಎಂ. ಮಾರ್ಕಂಡಪ್ಪ | ಪ.ಜಾ. | ಸಮಾಜಸೇವೆ | ೪೫ |
| ೧೮. | ಉಜ್ಜಿನಿ | ಕೆ.ದುರುಗಪ್ಪ (ಹಟ್ಟಿ ಯಜಮಾನ) | ಪ.ಜಾ. | ವ್ಯವಸಾಯ | ೭೫ |
| ೧೯. | ಉಜ್ಜಿನಿ | ವರದರಾಜ್ | ವೈಶ್ಯ | ವ್ಯಾಪಾರ | ೩೦ |
| ೨೦. | ಉಜ್ಜಿನಿ | ಮಂಜುನಾಥ.ಡಿ. | ಸಾಧು ವೀರ-ಶೈವ | ಒಕ್ಕಲುತನ ವ್ಯಾಪಾರ | ೪೫ |
| ೨೧. | ಉಜ್ಜಿನಿ | ಭಾನು ಪ್ರಕಾಶ್ | ನೇಕಾರ | ಶಿಕ್ಷಣ | ೪೫ |
| ೨೨. | ಉಜ್ಜಿನಿ | ದೊಡ್ಡ ಬಸಪ್ಪ | ನೇಕಾರ | ಗ್ರಂಥಪಾಲಕರು | ೨೫ |
| ೨೩. | ಉಜ್ಜಿನಿ | ಡಾ. ರೇವಯ್ಯಾ ಒಡೆಯರ್ | ಕುರುಬ | ಶಿಕ್ಷಣ | ೩೦ |
| ೨೪. | ಉಜ್ಜಿನಿ | ಹರಿನಾಥ | ಒಕ್ಕಲಗರು | ರಾಜಕೀಯ & ಒಕ್ಕಲುತನ | ೩೫ |
| ೨೫. | ಉಜ್ಜಿನಿ | ಜಗದ್ಗುರುಗಳು | ಪಂಚಪೀಠಮಠ | | ೪೨ |

# ಗ್ರಂಥ ಸೂಚಿ


| ಕ್ರ.ಸಂ. | ಗ್ರಂಥ | ಕರ್ತೃ | ಪ್ರಕಾಶನ | ವರ್ಷ |
|---|---|---|---|---|
| ೧. | ಗೊಳಸಂಗಿ ಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ | ಅರ್ಜುನ ಯು. ಗೊಳಸಂಗಿ | ಮಲ್ಲಿಕಾರ್ಜುನ ಪ್ರಕಾಶನ, ಗೊಳಸಂಗಿ | ೧೯೯೫ |
| ೨. | ಭಾರತದ ಹಳ್ಳಿಗಳು | ಈಶ್ವರನ್ ಹಿರೇಮಲ್ಲೂರ ಕೆ. | ಪ್ರಸಾರಾಂಗ, ಮೈಸೂರು ವಿ.ವಿ. ಮೈಸೂರು | ೧೯೭೨ |
| ೩. | ಸಮಾಜಿಕ ಅಧ್ಯಯನಗಳು | ಕೃಷ್ಣಪ್ಪ ಎಸ್. | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. | ೧೯೮೨ |
| ೪. | ಮಹಿಳೆಯರು | ಗಾಂಧೀ ಮೋ.ಕ. | ಗಾಂದೀ ಸ್ಮಾರಕನಿಧಿ, ಕರ್ನಾಟಕ ಶಾಖೆ, ಬೆಂಗಳೂರು | ೧೯೬೯ |
| ೫. | ಚನ್ನದೇವಿ ಅಗ್ರಹಾರ ಜಾನಪದೀಯ ಅಧ್ಯಯನ | ಗೋವಿಂದರಾಜು ಟಿ. | ತಳಗವಾದಿ ಪ್ರಕಾಶನ, ಮೈಸೂರು | ೧೯೯೮ |
| ೬. | ಕೆಲವು ಜನಪದ ಸಂಪ್ರದಾಯಗಳು | ಚಲುವೇಗೌಡ ತ.ಚಿ. | ರಶ್ಮಿ ಮುದ್ರಣ, ಬೆಂಗಳೂರು | ೧೯೯೩ |
| ೭. | ಗ್ರಾಮೀಣ | ಚಿದಾನಂದಮೂರ್ತಿ | ಬಾಪ್ಕೋ ಪ್ರಕಾಶನ, ಬೆಂಗಳೂರು | ೧೯೮೪ |
| ೮. | ಒಂದು ಗ್ರಮಾದ ಜಾನಪದೀಯ ಅಧ್ಯಯನ | ಚೆನ್ನಣ್ಣ ವಾಲೀಕಾರ | ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ | ೧೯೯೧ |
| ೯. | ಜಾನಪದ ಲೋಕ | ಚೆನ್ನಣ್ಣ ವಾಲೀಕಾರ | ದ.ಬಂಡಾಯ ಪ್ರಚಾರ ಸಮಿತಿ, ಗುಲಬರ್ಗಾ | ೧೯೯೩ |
| ೧೦. | ಸಿರಿಯೊಡಲು | ಜವರೇಗೌಡ | ೬೩ನೇ ಅಖಿಲಭಾರತ ಕ.ಸಾಹಿತ್ಯ ಪರಿಷತ್ತು, ಮಂಡ್ಯ | ೧೯೯೪ |
| ೧೧. | ಗ್ರಾಮ ಸಮಾಜ | ಜೋಗನ್ ಶಂಕರ್ | ಜೀವ ಪ್ರಕಾಶನ, ಮೈಸೂರು | ೧೯೯೫ |
| ೧೨. | ಸಮಾಜಿಕ ಮಾನವಶಾಸ್ತ್ರ | ನಂಜಮ್ಮಣಿ. ಎಂ. | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು | ೧೯೭೪ |
| ೧೩. | ನನ್ನೂರು | ನಾಗೇಗೌಡ ಎಚ್.ಎಲ್. | ಕರ್ನಾಟಕ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು | ೧೯೭೪ |
| ೧೪. | ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು | ಪರಮಶಿವಯ್ಯ ಜೀ.ಶಂ. | ಪ್ರಸಾರಾಂಗ, ಮೈಸೂರು ವಿ.ವಿ. ಮೈಸೂರು | ೧೯೭೯ |
| ೧೫. | ಹುಟ್ಟು ಸಾವುಗಳ ಮಧ್ಯ | ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು | ತರಳುಬಾಳು ಜಗದ್ಗುರು ಬೃಹನ್ಮಠ, ಸಿರಿಗೇರಿ | ೧೯೯೦ |
| ೧೬. | ಶೈಕ್ಷಣಿಕ ಸಂಶೋಧನೆ | ಪದ್ಮಪ್ರಸಾದ್ ಎಸ್.ಪಿ. | ಉಪಾಧ್ಯಾಯರ ಸ ತರಬೇತಿ ವಿದ್ಯಾಲಯ, ಧಾರವಾಡ | ೧೯೭೨ |
| ೧೭. | ಉಜ್ಜಿನಿ ಚೌಡಮ್ಮ | ಬೋರಲಿಂಗಯ್ಯ ಹಿ.ಚಿ. | ದಿನಕರ ಪ್ರಕಾಶನ, ಬೆಂಗಳೂರು | ೧೯೭೯ |
| ೧೮. | ಕಾಡು ಕಾಂಕ್ರೀಟ್ ಮತ್ತು ಜಾನಪದ | ಬೋರಲಿಂಗಯ್ಯ ಹಿ.ಚಿ. | ಅಕ್ಷರ ಪ್ರಕಾಶನ, ಹೆಗ್ಗೋಡು. ಸಾಗರ | ೧೯೯೮ |
| ೧೯. | ಸಮಾಜಕಾರ್ಯ | ಮರಳು ಸಿದ್ಧಯ್ಯ ಎಚ್. ಎಂ. | ಅಭ್ಯುದಯ ಪ್ರಕಾಶನ, ಬೆಂಗಲೂರು | ೧೯೬೦ |
| ೨೦. | ಗ್ರಾಮೋನ್ನತಿ | ಮರಳು ಸಿದ್ಧಯ್ಯ ಎಚ್. ಎಂ. | ಸ್ವಸ್ತಿ ಪ್ರಕಾಸನ, ಇಟ್ಟಗಿ | ೧೯೯೦ |
| ೨೧. | ಬಾಗಿಳಿಯೇ ಬಾಗಳಿಗೆ | ಮಹಾಬಲೇಶ್ವರ ಕಾಟ್ರಹಳ್ಳಿ | ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು | ೧೯೯೩ |
| ೨೨. | ಸಮಾಜಿಕ ಆಲೋಚನೆ | ಮಹೇಶ ತಿಪ್ಪಶೆಟ್ಟಿ | ದಾಳಿಂಬ ಪ್ರಕಾಶನ, ಹುನಗುಂದ | ೧೯೯೫ |
| ೨೩. | ಹುಟ್ಟಿದ ಹಳ್ಳಿ ಹಳ್ಳದ ಹಾಡು | ರಂಗಸ್ವಾಮಿ ಬಿ. | ಪ್ರಸಾರಾಂಗ, ಮೈಸೂರು ವಿ.ವಿ. ಮೈಸೂರು | ೧೯೩೩ |

| NO | BOOK | WRITER | PUBLISH | YEAR |
|---|---|---|---|---|
| 1. | Hindu Manners Customs and Crcmonics | Abbe Duboos | Beauchamp H.K. London | 1959 |
| 2 | The Mysore Tribles and Castes | Annatha Iyar, Namnjundaihah | Mysore University, Mysore | 1926 |
| 3. | Meet My People | Devendra Satyarthi | Hyderabad | 1951 |
| 4. | Calture Educational Society | Javare Gowda | Mysore | 1974 |
| 5. | Indian Social Problems | Madon G.R. | Allied Publishing House, Madras | 1991 |
| 6. | Indias Villagers | Srinvas M.N. | Asia Publishing House Bombay | 1966 |
| 7. | The Remembered Village | Srinvas M.N. | Oxford University Press, Bombay | 1976 |
| 8. | Relevance in Socialogical Research | Doshi S.L. | Rewat Publication, Jaipur | 1991 |
| 9. | Theory and Methods at Social Research | Johan gatting | S. Chand L.T.D. Ramnagar, New - Delhi | 1967 |
| 10. | Research Methodalogy Methods and Techniques | Kothari C.R. | Wiley Easteran Limited, New-Delhi | 1991 |
| 11. | Methods and Techniques at Social Reserch | Kumar | Lakshminarain Agrwal, Agra | 1991 |
| 12. | The Religions at India | Karmarkar | Lanovala | |
| 13. | Economic Conditions in Kartaka | Kuppaswamy G.R. | Karnataka Univarsity, Dharwad | 1975 |
| 14. | Folklore at Tamilnadu | S.M.L. Lakshmana | N.B. Trust New-Delhi | 1980 |
| 15. | Mysore Gazetter | Hayavadan Rao C. | Govt. Press, Bangalore | 1930 |
| 16. | Coloured Rice Symbalic Structur in Hindu Family Festivals | Haehett Szanne | Newyork | 1988 |
| 17. | Folklore at Madhya Pradesh | Paramar Shyam | National Book Trust, New-Delhi | 1981 |
| 18. | Folk Lores and Rituals in Triballite | Pramod Kumar | Abhinav Publications | 1984 |
| 19. | A Maya Village | Redfield-Rabort and Alfonso Villa Rajas | Phoenix Books Chicago | 1962 |
| 20. | The Remombered Village | Srinivas M.N. | Oxford Univerity press Delhi | 1979 |

# ಛಾಯ ಚಿತ್ರಗಳ ವಿವರಣೆ

೧. ಶ್ರೀಮದ್ ಉಜ್ಜಯಿನೀ ಸದ್ಧರ್ಮ ಸಿಂಹಾಸನ ಮಹಾಸಂಸ್ಥಾನದ ನೋಟ

೨. ಮರುಳ ಸಿದ್ಧೇಶ್ವರ

೩. ಕಮಲ ಸ್ತೂಪ

೪. ಜಕ್ಕಣಚಾರಿ

೫. ಶ್ರೀ ಪಂಡಿತಾರಾಧ್ಯ

೬. ಶ್ರೀ ಸಿದ್ಧರಾಮ

೭. ದೇವಸ್ಥಾನದ ಮುಂದಿನ ಶಾಸನ

೮. ಸಪ್ತಲಿಂಗ

೯. ಕಗ್ಗಲು ಗೌಡ

೧೦. ಮರುಳಾರಾಧ್ಯ

೧೧. ಶ್ರೀ ಕೃಷ್ಣ

೧೨. ಜಗದ್ಗುರು ಪಾದ

೧೩. ಸಹಸ್ರ ದಳ ಕಮಲ

೧೪. ಉದ್ಯಾನ ವೀರಭದ್ರ

